| | | |
|---|---|---|
| 396 | ಶ್ರೀ ಕಾಶೆಪ್ಪಾ ಅಣ್ಣಾರಾವ, ಔರಾದ ಗ್ರಾಮ, ಅಂಚೆ & ತಾಲೂಕು, ಬೀದರ್ ಜಿಲ್ಲೆ | ಜಾನಪದ |
| 397 | ಶ್ರೀ ಕಲ್ಲಪ್ಪಾ ಬಿನ್ ಪೀರಪ್ಪ, ಚೌಂಬೋಳ ಗ್ರಾಮ & ಅಂಚೆ, ಬೀದರ್ ತಾಲೂಕು & ಜಿಲ್ಲೆ | ಜಾನಪದ |
| 398 | ಶ್ರೀ ಶರಣಯ್ಯ ಬಿನ್ ಸಿದ್ರಾಮಯ್ಯ ಎಕಲಾರ ಗ್ರಾಮ & ಅಂಚೆ, ಔರಾದ ತಾಲೂಕು, ಬೀದರ್ ಜಿಲ್ಲೆ | ಜಾನಪದ |
| 399 | ಶ್ರೀಮತಿ ಪಾರಮ್ಮ ಕೋಂ ಫಾಳೆಪ್ಪ ಬೇಮಳಖೇಡ ಗ್ರಾಮ & ಅಂಚೆ, ಹುಮನಾಬಾದ್ ತಾಲೂಕು & ಬೀದರ್ | ಜಾನಪದ |
| 400 | ಶ್ರೀಮತಿ ಲಕ್ಷ್ಮೀಬಾಯಿ ಕೋಂ ಜಗನ್ನಾಥ ಜೋಜನಾ ಗ್ರಾಮ & ಅಂಚೆ, ಔರಾದ ತಾಲೂಕು, ಬೀದರ್ ಜಿಲ್ಲೆ | ಜಾನಪದ |

**(ಹೆಚ್. ವಿ. ರಾಮಚಂದ್ರರಾವ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

ಪಿ.ಆರ್. ನಂ. 1822

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಮುನೇನಕೊಪ್ಪ, ಎಂ.ಬಿ. ಜಿಲ್ಲಾ ಕ್ಷಯರೋಗ ನಿಯಂತ್ರಣ ಅಧಿಕಾರಿ, ಹುಬ್ಬಳ್ಳಿ, ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ: ಜೆಆರ್‌ಒ(3)/176/2009–10 ದಿನಾಂಕ 14–05–2010.

**ಪ್ರಸ್ತಾವನೆ :**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಮೇಲೆ ಓದಲಾದ ಪತ್ರದಲ್ಲಿ ಡಾ: ಮುನೇನಕೊಪ್ಪ, ಎಂ.ಬಿ. ಜಿಲ್ಲಾ ಕ್ಷಯರೋಗ ನಿಯಂತ್ರಣ ಅಧಿಕಾರಿ, ಹುಬ್ಬಳ್ಳಿ, ಇವರು ದಿನಾಂಕ 15–10–2009 ರಿಂದ ಒಪ್ಪಿಕೊಳ್ಳುವಂತೆ ಕೋರಿ ರಾಜೀನಾಮೆಯನ್ನು ಸಲ್ಲಿಸಿದ್ದು, ಇವರ ವಿರುದ್ಧ ಇಲಾಖಾ ವಿಚಾರಣೆ ಇರುವುದಿಲ್ಲ ಹಾಗೂ ಬಾಂಡ್ ಅವಧಿಯಲ್ಲಿ ಇರುವುದಿಲ್ಲವೆಂದು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ, ಧಾರವಾಡ ಇವರು ತಿಳಿಸಿರುವುದರಿಂದ ದಿನಾಂಕ 15–10–2009 ರಿಂದ ಜಾರಿಗೆ ಬರುವಂತೆ ವೈದ್ಯರ ರಾಜೀನಾಮೆಯನ್ನು ಅಂಗೀಕರಿಸಲು ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 277 ಹೆಚ್‌ಎಸ್‌ಹೆಚ್ 2010, ಬೆಂಗಳೂರು, ದಿನಾಂಕ : 22–07–2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 252(ಎ) ರನ್ವಯ ಡಾ: ಮುನೇನಕೊಪ್ಪ, ಎಂ.ಬಿ. ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ/ಜಿಲ್ಲಾ ಕ್ಷಯರೋಗ ನಿಯಂತ್ರಣ ಅಧಿಕಾರಿ, ಹುಬ್ಬಳ್ಳಿ, ಇವರು ನೀಡಿರುವ ರಾಜೀನಾಮೆಯನ್ನು ದಿನಾಂಕ 15–10–2009 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಐ. ಹೇಮನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು–1)

ಪಿ. ಆರ್. 1913

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಮೈಸೂರು ಸಕ್ಕರೆ ಕಾರ್ಖಾನೆ (ನಿ)., ಮಂಡ್ಯ – ಸಹ ವಿದ್ಯುತ್ ಘಟಕ ಸ್ಥಾಪನೆಗಾಗಿ ಹುಡ್ಕೋ ಸಂಸ್ಥೆಯಿಂದ ಪಡೆದಿದ್ದ ಸಾಲದ ಮರುಪಾವತಿಗಾಗಿ (ದಿನಾಂಕ 30–06–2010ರ ಅಂತ್ಯಕ್ಕೆ) ಸರ್ಕಾರದಿಂದ ಅಸಲು ಮತ್ತು ಬಡ್ಡಿ ಪಾವತಿ ಮಾಡಲು ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಸಿಐ 184 ಎಸ್‌ಜಿಎಫ್ 2007 ದಿನಾಂಕ 26–03–2010.
2) **ರೀಜನಲ್ ಚೀಫ್, ಹುಡ್ಕೋರವರ ಪತ್ರ ಸಂಖ್ಯೆ:** HUDCO/BRO/KAR/MSCL/16757 & 16989/2010/390 **ದಿನಾಂಕ 14–06–2010.**
3) Manager Finance and Accounts, **ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರ ಸಂಖ್ಯೆ:** AC:MF:327:10-11 **ದಿನಾಂಕ 25–06–2010.**

**ಪ್ರಸ್ತಾವನೆ :**

ಮೈಸೂರು ಸಕ್ಕರೆ ಕಾರ್ಖಾನೆ (ನಿ) ಮಂಡ್ಯ ಈ ಕಾರ್ಖಾನೆಯಲ್ಲಿ ಸಹ ವಿದ್ಯುತ್ ಘಟಕ ಸ್ಥಾಪನೆಗಾಗಿ ಹುಡ್ಕೋ ಹಣಕಾಸು ಸಂಸ್ಥೆಯಿಂದ 5726.16 ಲಕ್ಷ ರೂ.ಗಳ ಸಾಲ ಪಡೆಯಲು ದಿನಾಂಕ 30–07–2001 ರಂದು ಕಾರ್ಖಾನೆಯು ಹುಡ್ಕೋನೊಂದಿಗೆ ಒಪ್ಪಂದ ಮಾಡಿಕೊಂಡಿದ್ದು, ರಾಜ್ಯ ಸರ್ಕಾರವು ಸದರಿ ಸಾಲಕ್ಕೆ ಗ್ಯಾರಂಟಿ ನೀಡಿದ್ದು, ಮೇಲೆ ಓದಲಾದ (1) ರಲ್ಲಿರುವ ಆದೇಶದಲ್ಲಿ ಹುಡ್ಕೋ ಸಂಸ್ಥೆಯು ಮಾಡಿದ OTS offer ನಂತೆ ಸಾಲದ ಮೇಲಿನ ಕ್ರೋಢೀಕೃತ ಬಡ್ಡಿ ಪಾವತಿಗಾಗಿ 3703.64 ಲಕ್ಷ ರೂ.ಗಳನ್ನು ಹುಡ್ಕೋ ಸಂಸ್ಥೆಗೆ ಪಾವತಿಸುವ ಸಲುವಾಗಿ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (2) ರಲ್ಲಿರುವ ರೀಜನಲ್ ಚೀಫ್, ಹುಡ್ಕೋ ರವರ ಪತ್ರದಲ್ಲಿ OTS offer ನಂತೆ ಮಾರ್ಚ್ 2010ರ ಅಂತ್ಯಕ್ಕೆ ಅಸಲು ಮತ್ತು ಬಡ್ಡಿ ಸೇರಿ 529.46 ಲಕ್ಷ ರೂ.ಗಳು ಮತ್ತು ಜೂನ್ 2010ರ ಅಂತ್ಯಕ್ಕೆ ಅಸಲು ಮತ್ತು ಬಡ್ಡಿ ಸೇರಿ 372.76 ಲಕ್ಷ ರೂ.ಗಳು ಸೇರಿ ಒಟ್ಟು 902.22

ಲಕ್ಷ ರೂ.ಗಳನ್ನು ಕಾರ್ಖಾನೆಯು ಹುಡ್ಕೋ ಸಂಸ್ಥೆಗೆ ಪಾವತಿಸಬೇಕಾಗಿದೆ ಎಂದು ಸದರಿ ಹಣದ ಪಾವತಿ ಮಾಡುವಂತೆ ಕಾರ್ಖಾನೆಯ ವ್ಯವಸ್ಥಾಪಕ ನಿರ್ದೇಶಕರಿಗೆ ಬೇಡಿಕೆ ಸಲ್ಲಿಸಿದ್ದಾರೆ.

ಮೇಲೆ ಓದಲಾದ (3) ರಲ್ಲಿರುವ ಮೈಸೂರು ಸಕ್ಕರೆ ಕಾರ್ಖಾನೆಯ ಮ್ಯಾನೇಜರ್ ಫೈನಾನ್ಸ್ ಅಂಡ್ ಅಕೌಂಟ್ಸ್ ರವರ ಪತ್ರದಲ್ಲಿ OTS offer ನಂತೆ ದಿನಾಂಕ 30–06–2010ರ ಅಂತ್ಯಕ್ಕೆ ಅಸಲು ಮತ್ತು ಬಡ್ಡಿ ಸೇರಿ 902.22 ಲಕ್ಷ ರೂ.ಗಳನ್ನು ಹುಡ್ಕೋಗೆ ಪಾವತಿಸಬೇಕಾಗಿದ್ದು, ಹುಡ್ಕೋ ಸಂಸ್ಥೆಗೆ ಪಾವತಿಸಲು ಕಾರ್ಖಾನೆಯ ಬಳಿ ಹಣ ಇಲ್ಲದಿರುವುದರಿಂದ ಸರ್ಕಾರದಿಂದ ಬಿಡುಗಡೆ ಮಾಡುವಂತೆ ಮನವಿ ಮಾಡಿದ್ದಾರೆ.

ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಹುಡ್ಕೋ ಸಂಸ್ಥೆಯ ಜೊತೆಗೆ ಮಾಡಿಕೊಳ್ಳಲಾಗಿರುವ OTS offer ನಂತೆ ದಿನಾಂಕ 30–06–2010ರ ಅಂತ್ಯಕ್ಕೆ ಸಂಸ್ಥೆಗೆ ಪಾವತಿಸಬೇಕಾದ ಅಸಲು ಮತ್ತು ಬಡ್ಡಿ ಸೇರಿ 902.22 ಲಕ್ಷ ರೂ.ಗಳನ್ನು ಸರ್ಕಾರದಿಂದ ಪಾವತಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಐ 184 ಎಸ್‌ಜಿಎಫ್ 2007 ಬೆಂಗಳೂರು, ದಿನಾಂಕ : 23–07–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ ಈ ಕಾರ್ಖಾನೆಯ ಸಹವಿದ್ಯುತ್ ಘಟಕ ಸ್ಥಾಪನೆಗಾಗಿ ಮತ್ತು ಶುಗರ್ಸ್ ಗೋಡೌನ್ ಕಟ್ಟಲು ಹುಡ್ಕೋ ಹಣಕಾಸು ಸಂಸ್ಥೆಯಿಂದ ಪಡೆಯಲಾಗಿದ್ದ 5726.16 ಲಕ್ಷ ರೂ.ಗಳ ಸಾಲದ ಮರುಪಾವತಿ ಸಂಬಂಧ ಹುಡ್ಕೋ ಸಂಸ್ಥೆಯು ಮಾಡಿರುವ OTS offer ನಂತೆ ಮಾರ್ಚ್ 2010ರ ಅಂತ್ಯಕ್ಕೆ ಪಾವತಿಸಬೇಕಾದ ಅಸಲು ಮತ್ತು ಬಡ್ಡಿ 529.46 ಲಕ್ಷ ರೂ. ಮತ್ತು ಜೂನ್ 2010ರ ಅಂತ್ಯಕ್ಕೆ ಪಾವತಿಸಬೇಕಾದ ಅಸಲು ಮತ್ತು ಬಡ್ಡಿ 372.76 ಲಕ್ಷ ರೂ. ಸೇರಿ ಒಟ್ಟು 902.22 ಲಕ್ಷ ರೂ.ಗಳನ್ನು (ಒಂಬೈನೂರ ಎರಡು ಲಕ್ಷ ಮತ್ತು ಇಪ್ಪತ್ತೆರಡು ಸಾವಿರ ರೂ.ಗಳು ಮಾತ್ರ) ಹುಡ್ಕೋ ಸಂಸ್ಥೆಗೆ ಪಾವತಿಸುವ ಸಲುವಾಗಿ ಬಿಡುಗಡೆ ಮಾಡಲಾಗಿದೆ.

OTS offer ನಲ್ಲಿ ವಿಧಿಸಿರುವ ಷರತ್ತು ಮತ್ತು ನಿಬಂಧನೆಗಳಂತೆ ಬಾಕಿ ಇರುವ ಹಣವನ್ನು ಕಾಲಕಾಲಕ್ಕೆ ಕಾರ್ಖಾನೆಯು ಬಡ್ಡಿಯೊಂದಿಗೆ ಹುಡ್ಕೋ ಸಂಸ್ಥೆಗೆ ಮರುಪಾವತಿಸಲು ಕ್ರಮ ತೆಗೆದುಕೊಳ್ಳುವುದು.

2010–11ನೇ ಸಾಲಿನ ಅನುದಾನದಲ್ಲಿ ಈ ಉದ್ದೇಶಕ್ಕಾಗಿ ಯಾವುದೇ ಹಣವನ್ನು ಒದಗಿಸಿರುವುದಿಲ್ಲ. 2010–11ನೇ ಸಾಲಿನ ಆಯುವ್ಯಯದಲ್ಲಿ ಕಾರ್ಖಾನೆಯ ಯಂತ್ರಸ್ಥಾವರಗಳ ನವೀಕರಣ ಸಂಬಂಧ ಲೆಕ್ಕ ಶೀರ್ಷಿಕೆ "4860–04–190–1–00–211" ಅಡಿಯಲ್ಲಿ ಒದಗಿಸಿರುವ ಅನುದಾನದಲ್ಲಿ Equity ಎಂದು ಈ ಹಣವನ್ನು ಬಿಡುಗಡೆ ಮಾಡಲಾಗಿದೆ.

ಹಣ ಸೆಳೆಯುವ ಅಧಿಕಾರಿಯು ಸಹಾಯಕ ನಿರ್ದೇಶಕರು (ಹೆಚ್.ಆರ್.ಡಿ) (ಆಡಳಿತ ಮತ್ತು ಇಎಂ) ಜಿಲ್ಲಾ ಕೈಗಾರಿಕಾ ಕೇಂದ್ರ ಮಂಡ್ಯ, ಆಗಿದ್ದು ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1203 ವೆಚ್ಚ–1/2010 ದಿನಾಂಕ 13–07–2010 ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪಿ. ಆನಂದಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ. ಆರ್. 1914

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಹೆಚ್.ಎಸ್. ರಾಮಕೃಷ್ಣ, ಕೆಎಎಸ್ (ಕಿರಿಯ ಶ್ರೇಣಿ), ಹಿಂದಿನ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ, ಶಿವಮೊಗ್ಗ ಇವರ ವಿರುದ್ಧ ಇಲಾಖಾ ವಿಚಾರಣೆ – ಅಂತಿಮ ಆದೇಶದ ಬಗ್ಗೆ ಮೇಲ್ಮನವಿ–ಆದೇಶ.

**ಓದಲಾಗಿದೆ :**
1) ದಿನಾಂಕ 23–07–2009ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 020 ಕೆಇವಿ 07.
2) ಶ್ರೀ ಹೆಚ್.ಎಸ್. ರಾಮಕೃಷ್ಣ, ಕೆಎಎಸ್ (ಕಿರಿಯ ಶ್ರೇಣಿ), ಇವರ ದಿನಾಂಕ: 14–10–2009 ರ ಮೇಲ್ಮನವಿ.
3) ಘನತೆವೆತ್ತ ರಾಜ್ಯಪಾಲರಿಗೆ ಸಲ್ಲಿಸಿದ ಮೇಲ್ಮನವಿಯ ಕುರಿತಂತೆ ಕಂಡಿಕೆವಾರು ಷರಾವನ್ನೊಳಗೊಂಡ ನಿವೇದನಾ ಟಿಪ್ಪಣಿ.
4) ಘನತೆವೆತ್ತ ರಾಜ್ಯಪಾಲರ ಆದೇಶ ದಿನಾಂಕ 22–06–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಶ್ರೀ ಹೆಚ್.ಎಸ್. ರಾಮಕೃಷ್ಣ, ಕೆಎಎಸ್ (ಕಿರಿಯ ಶ್ರೇಣಿ), ಇವರು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ, ಶಿವಮೊಗ್ಗ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಆರು ಅನುದಾನಿತ ವಸತಿ ನಿಲಯಗಳಿಗೆ ಸಂಬಂಧಿಸಿದಂತೆ ಆಹಾರ ವೆಚ್ಚದ ಬಿಲ್ಲುಗಳನ್ನು ಹೆಚ್ಚಿಗೆ ಡ್ರಾ ಮಾಡಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟುಮಾಡಿರುವ ಆರೋಪವು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರಂತೆ ನಡೆದ ಇಲಾಖಾ ವಿಚಾರಣೆಯಿಂದ ಸಾಬೀತಾಗಿದ್ದು, ಇವರಿಗೆ ಸದರಿ ನಿಯಮಾವಳಿಯ ನಿಯಮ 8 (iii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಇವರಿಗೆ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ (without cumulative effect) ತಡೆಹಿಡಿಯುವ ದಂಡನೆ ವಿಧಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ದಿನಾಂಕ 23–07–2009ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 020 ಕೆಇವಿ 07 ಅನ್ನು ವಜಾಗೊಳಿಸುವಂತೆ ಮತ್ತು ತತ್ಸಂಬಂಧದ ಸೌಲಭ್ಯಗಳನ್ನು ಮಂಜೂರು ಮಾಡುವಂತೆ ಕೋರಿ ಶ್ರೀ ಹೆಚ್.ಎಸ್. ರಾಮಕೃಷ್ಣ, ಕೆಎಎಸ್ (ಕಿರಿಯ ಶ್ರೇಣಿ) ರವರು ಘನತೆವೆತ್ತ ರಾಜ್ಯಪಾಲರು, ಕರ್ನಾಟಕ ಸರ್ಕಾರ ಇವರಿಗೆ ಸದರಿ ನಿಯಮಾವಳಿಗಳಡಿ ಮೇಲ್ಮನವಿ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ಅಧಿಕಾರಿಯು ಸಲ್ಲಿಸಿರುವ ಮೇಲ್ಮನವಿಗೆ ಕಂಡಿಕೆವಾರು ಷರಾ ಒಳಗೊಂಡಂತೆ ನಿವೇದನಾ ಟಿಪ್ಪಣಿಯನ್ನು ಘನತೆವೆತ್ತ ರಾಜ್ಯಪಾಲರಿಗೆ ಸಲ್ಲಿಸಲಾಗಿತ್ತು.

ಅಧಿಕಾರಿಯ ಮೇಲ್ಮನವಿ ಮತ್ತು ಸರ್ಕಾರದ ನಿವೇದನಾ ಟಿಪ್ಪಣಿಯನ್ನು ಘನತೆವೆತ್ತ ರಾಜ್ಯಪಾಲರು ಕರ್ನಾಟಕ ಸರ್ಕಾರ ಇವರು ಪ್ರಕರಣಕ್ಕೆ ಸಂಬಂಧಿಸಿದ ಕಡತದೊಂದಿಗೆ ಕೂಲಂಕಷವಾಗಿ ಅವಲೋಕಿಸಿದ ನಂತರ ಕೆಳಕಂಡಂತೆ ಆದೇಶಿಸಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 020 ಕೆಇವಿ 2007, ಬೆಂಗಳೂರು, ದಿನಾಂಕ : 21ನೇ ಜುಲೈ, 2010**

## ORDER

(This the 22nd day of June 2010)

This is an appeal filed by Sri H.S. Ramakrishna, KAS (Junior Scale), Special Land Acquisition Officer, Karnataka Industrial Area Development Board, Bangalore, under rule 18 of KCS (CC&A) Rules 1957 against the orders of the Government imposing a penalty of withholding one increment without cumulative effect in the disciplinary proceedings initiated against him for the charges of causing pecuniary losses to Government by not properly scrutinizing proposals for sanction of grant-in-aid to the hostels in the year 2000 while working as District Social Welfare Officer, Shimoga district.

The enquiry report along with the records of the Government imposing the penalty have been received. I have carefully perused the grounds of appeal. The enquiry has been conducted properly. The appellant has been given opportunity to cross examine the withnesses as well as to file his statement. The appellant has not made out as to how the enquiry was defective. Similarly, the enquiry officer in his report has clearly discussed the evidence and given his findings based on the facts. Therefore, there is no legal infirmity in the procedure followed by the enquiry officer. I have also perused the respondents file on behalf of the Government of Karnataka. Both on facts and law, there is no merit in this appeal. I decline to interfere in the impugned order. Appeal dismissed.

Sd/-
(HANSRAJ BHARDWAJ)
Governor of Karnataka

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

ಪಿ. ಆರ್. 1915

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಬೆಂಗಳೂರು ನಗರ ಜಿಲ್ಲೆಯ ಕೆಂಗೇರಿಯಲ್ಲಿ ಮಹಾತ್ಮ ಗಾಂಧೀಜಿಯವರ ಸ್ಮಾರಕ ನಿರ್ಮಿಸುವ ಕುರಿತು.

**ಓದಲಾಗಿದೆ :** ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಇವರ ಪತ್ರ ಸಂಖ್ಯೆ ಕೆಮವಿ/ಗಾಸ್ಮಾಭ/ಸಭೆ:1:2010–11 ದಿನಾಂಕ 17–05–2010.

**ಪ್ರಸ್ತಾವನೆ :**

2010–11ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಗಳು ಮಹಾತ್ಮ ಗಾಂಧೀಜಿಯವರ ಹೆಸರಿನಲ್ಲಿ ಬೆಂಗಳೂರುನಗರ ಜಿಲ್ಲೆ ಕೆಂಗೇರಿಯಲ್ಲಿ ಮಹಾತ್ಮ ಗಾಂಧೀಜಿಯವರು ಭೇಟಿ ನೀಡಿದ ಸ್ಥಳದಲ್ಲಿ ಸ್ಮಾರಕ ಭವನ ನಿರ್ಮಿಸಲು ರೂ. 1.00 ಕೋಟಿಗಳನ್ನು ನೀಡುವುದಾಗಿ ಘೋಷಣೆ ಮಾಡಿರುತ್ತಾರೆ.

ಮೇಲೆ ಓದಲಾದ ದಿನಾಂಕ 17–05–2010ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರಜಿಲ್ಲೆ ಇವರು ಮಹಾತ್ಮ ಗಾಂಧೀಜಿಯವರು ಭೇಟಿ ನೀಡಿದ ಸ್ಥಳ ಕೆಂಗೇರಿಯಲ್ಲಿ ಗಾಂಧೀಜಿ ಸ್ಮಾರಕ ಭವನ ನಿರ್ಮಾಣ ಮಾಡುವ ಸಂಬಂಧ ಹಿರಿಯ ಸ್ವಾತಂತ್ರ್ಯ ಹೋರಾಟಗಾರರು ಹಾಗೂ ಅಧಿಕಾರಿಗಳೊಂದಿಗೆ ಸ್ಥಳ ಪರಿಶೀಲನೆ ನಡೆಸಿದ್ದು ಸದರಿ ಸ್ಥಳದಲ್ಲಿ ಈಗಾಗಲೇ ಗಾಂಧಿ ಪ್ರತಿಮೆ ಇರುತ್ತದೆ. ಮತ್ತು ಸ್ಮಾರಕ ಭವನದ ಹಳೆ ಕಟ್ಟಡವಿರುತ್ತದೆ, ಸದರಿ ಕಟ್ಟಡ ಶಿಥಿಲವಾಗಿದ್ದು, ಶಿಥಿಲವಾದ ಕಟ್ಟಡವನ್ನು ಕೆಡವಿ ಅದೇ ಸ್ಥಳದಲ್ಲಿ ಸ್ಮಾರಕ ಭವನ ನಿರ್ಮಿಸಬೇಕಾಗಿರುತ್ತದೆ, ಈ ಕಟ್ಟಡದಲ್ಲಿ ಲೋಕ ಶಿಕ್ಷಣ ಇಲಾಖೆ, ಅಲ್ಪಾವಧಿ ತರಬೇತಿ
ಶಾಲೆ ಇರುತ್ತದೆ. ವಯಸ್ಕರ ಶಿಕ್ಷಣ ಇಲಾಖೆಯ ವಿದ್ಯಾಪೀಠದ ಜಮೀನು ಸುಮಾರು 14 ಎಕರೆ ಇದ್ದು ಇದರಲ್ಲಿ ಹಾಲಿ ಇರುವ ಗಾಂಧೀಜಿ ಪ್ರತಿಮೆ ಮತ್ತು ಸ್ಮಾರಕ ಭವನವಿರುವ ಸುಮಾರು 5 ಎಕರೆ ಭೂಮಿಯನ್ನು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯಿಂದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಗಾಂಧಿ ಸ್ಮಾರಕ ನಿರ್ಮಿಸಲು ಹಸ್ತಾಂತರಿಸಬೇಕಿರುತ್ತದೆ. ಈ ಸಂಬಂಧದ ರೂ. 1.00 ಕೋಟಿಗಳ ಅಂದಾಜು ವೆಚ್ಚ ಹಾಗೂ ನೀಲಿ ನಕ್ಷೆಯನ್ನು ಕಾರ್ಯಪಾಲಕ ಅಭಿಯಂತರರು ಲೋಕೋಪಯೋಗಿ ಇಲಾಖೆ ಇವರಿಂದ ತಯಾರಿಸಿ ಸಲ್ಲಿಸಲಾಗುವುದೆಂದು ತಿಳಿಸಿರುತ್ತಾರೆ.

ಈ ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 30 ಸ್ಮಾಪ್ರನಿ 2010, ಬೆಂಗಳೂರು, ದಿನಾಂಕ : 20ನೇ ಜುಲೈ, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಂಗಳೂರು ನಗರಜಿಲ್ಲೆ ಕೆಂಗೇರಿಯಲ್ಲಿ ಮಹಾತ್ಮ ಗಾಂಧೀಜಿಯವರ ಸ್ಮಾರಕ ಭವನ ನಿರ್ಮಾಣಕ್ಕೆ ರೂ. 1.00 ಕೋಟಿ ಮೊತ್ತದ ಅನುದಾನವನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಜಿಲ್ಲಾಧಿಕಾರಿಗಳು ಬೆಂಗಳೂರು ನಗರಜಿಲ್ಲೆ ಇವರಿಗೆ ಬಿಡುಗಡೆ ಮಾಡಿದೆ. ಹಾಗೂ ಈ ಕಾಮಗಾರಿಯನ್ನು ರೂ. 1.00 ಕೋಟಿಗಳ ಮಿತಿಯೊಳಗೆ ಕೈಗೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡಿದೆ.

**ಷರತ್ತುಗಳು:**

1) ಕಾಮಗಾರಿಯ ಅಂದಾಜು ಪಟ್ಟಿಗೆ ಸಕ್ಷಮ ಪ್ರಾಧಿಕಾರದಿಂದ ಆಡಳಿತಾತ್ಮಕ ಹಾಗೂ ತಾಂತ್ರಿಕ ಅನುಮೋದನೆ ಪಡೆದುಕೊಳ್ಳುವುದು.

2) ಕಾಮಗಾರಿಯ ನಿರ್ವಹಣೆಗಾಗಿ ಟೆಂಡರ್ ಕರೆದು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999 ಹಾಗೂ ಅದರ ನಿಯಮಗಳು 2000 ರಂತೆ ಕ್ರಮ ಕೈಗೊಳ್ಳತಕ್ಕದ್ದು.
3) ಕಾಮಗಾರಿಯನ್ನು ಪೂರ್ಣಗೊಳಿಸಲು ಸಮಯ ನಿಗಧಿ ಪಡಿಸಿಕೊಂಡು ಆ ಸಮಯದೊಳಗೆ ಪೂರ್ಣಗೊಳಿಸುವುದು.
4) ಕಾಮಗಾರಿಯನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ನಗರಜಿಲ್ಲೆ ಇವರ ಮೇಲುಸ್ತುವಾರಿಯಲ್ಲಿ ಕೈಗೊಳ್ಳುವುದು.
5) ಇದು ಒಂದು ಬಾರಿಯ ಅನುದಾನವಾಗಿರುವುದರಿಂದ ಮುಂದಿನ ನಿರ್ವಹಣಾ ವೆಚ್ಚವನ್ನು ಸೂಕ್ತ ಪ್ರಾಧಿಕಾರವು ಭರಿಸತಕ್ಕದ್ದು.
6) ಕಾಮಗಾರಿಗೆ ಅನುದಾನ ಉಪಯೋಗಿಸಿದ ಬಗ್ಗೆ ಹಣ ಬಳಕೆ ಪ್ರಮಾಣ ಪತ್ರ ಸಲ್ಲಿಸುವುದು.

ಈ ಅನುದಾನವನ್ನು 2010-11ನೇ ಸಾಲಿನ ಲೆಕ್ಕ ಶೀರ್ಷಿಕೆ 2205-00-800-0-10-059 (ಯೋಜನೆ) ಸ್ವಾತಂತ್ರ್ಯ ಹೋರಾಟಗಾರರ ಸ್ಮಾರಕ ಅಭಿವೃದ್ಧಿ ಇದರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ 25-06-2010ರ ಟಿಪ್ಪಣಿ ಸಂಖ್ಯೆ: ಆಇ 425 ವೆಚ್ಚ-7/2010ರಲ್ಲಿ ಆರ್ಥಿಕ ಇಲಾಖೆಯ ಸಹಮತಿಯನ್ನು ಹಾಗೂ ದಿನಾಂಕ 14-06-2010ರ ಟಿಪ್ಪಣಿ ಸಂಖ್ಯೆ: ಯೋಇ/66/ಜಶ 2010ರಲ್ಲಿ ಯೋಜನಾ ಇಲಾಖೆಯ ಸಹಮತಿಯನ್ನು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

ಪಿ. ಆರ್. 1916

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ರಾಜ್ಯ ಮಟ್ಟದ ಅಣೆಕಟ್ಟು ಸುರಕ್ಷತಾ ಸಮಿತಿ (SLDSC)ಯ ಅಧಿಕಾರೇತರ ಸದಸ್ಯರುಗಳ ಪ್ರಯಾಣಕ್ಕೆ ವಿಮಾನ ಯಾನದ ಸೌಲಭ್ಯ ಒದಗಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ: ಜಸಂಇ 03 ಅಭಯೋ 2008 ಬೆಂಗಳೂರು, ದಿನಾಂಕ 07-01-2009.
2) ಸರ್ಕಾರಿ ಆದೇಶ ಸಂಖ್ಯೆ: ಜಸಂಇ 03 ಅಭಯೋ 2008 ಬೆಂಗಳೂರು, ದಿನಾಂಕ 01-09-2009.
3) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 02 ಎಸ್‌ಆರ್‌ಎ 99 ದಿನಾಂಕ 22-04-1999.
4) ಸರ್ಕಾರಿ ಆದೇಶ ಸಂಖ್ಯೆ: ಜಸಂಇ 03 ಇಂಸಂಕೇ 2001 ಬೆಂಗಳೂರು, ದಿನಾಂಕ 04-11-2003.
5) ನಿರ್ದೇಶಕರು, ಕ.ಇಂ.ಸಂ.ಕೇ., ಕೆ.ಆರ್. ಸಾಗರ ಇವರ ಪತ್ರ ಸಂಖ್ಯೆ: ಕೆಇಆರ್‌ಎಸ್/ಇಎಸ್‌ಟಿ-3/ಅಸಪ್ರಭ/589/10-11 ದಿನಾಂಕ 15-05-2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ಮತ್ತು (2)ರ ಸರ್ಕಾರಿ ಆದೇಶದಲ್ಲಿ ರಾಜ್ಯ ಮಟ್ಟದ ಆಣೆಕಟ್ಟು ಸುರಕ್ಷತಾ ಸಮಿತಿಯನ್ನು (SLDSC) ಪುನರ್ ರಚಿಸಲಾಗಿದ್ದು, ಈ ಸಮಿತಿಯು ಹಾಲಿ ಜಾಲ್ತಿಯಲ್ಲಿರುತ್ತದೆ. ಸದರಿ ಸಮಿತಿಗೆ ಶ್ರೀ ಬಿ.ಎಂ. ರಾಮೇಗೌಡ (ನಿ) ಜಂಟಿ ನಿರ್ದೇಶಕರು CWPRS, ಪುಣೆ ರವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿಕೊಳ್ಳಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಸರ್ಕಾರಿ ಆದೇಶದಂತೆ SLDSC ಯ ಅಧಿಕಾರೇತರ ಸದಸ್ಯರು ಸಭೆಗಳಿಗೆ ಹಾಜರಾಗಲು ರೈಲಿನಲ್ಲಿ ಪ್ರಯಾಣಿಸಲು ಅರ್ಹರಿರುತ್ತಾರೆ.

2. ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಸರ್ಕಾರಿ ಆದೇಶದಲ್ಲಿ ಅಣೆಕಟ್ಟು ಸುರಕ್ಷತಾ ಪರಿಶೀಲನಾ ಸಮಿತಿಯ (DSRP) ಅಧ್ಯಕ್ಷರು ಹಾಗೂ ಸದಸ್ಯರುಗಳಿಗೆ ಈಗಾಗಲೇ ವಿಮಾನ ಯಾನದ ಸೌಲಭ್ಯವನ್ನು ಕಲ್ಪಿಸಲಾಗಿರುತ್ತದೆ ಎಂದು ಕ್ರಮ ಸಂಖ್ಯೆ (5)ರ ಪತ್ರದಲ್ಲಿ ನಿರ್ದೇಶಕರು, ಕ.ಇಂ.ಸಂ.ಕೇ., ಹಾಗೂ ಸದಸ್ಯ ಕಾರ್ಯದರ್ಶಿ, SLDSC ರವರು ತಿಳಿಸಿರುತ್ತಾರೆ. ಅಂತೆಯೇ ಹೊರ ರಾಜ್ಯದಲ್ಲಿ ವಾಸಿಸುತ್ತಿರುವ SLDSC ಯ ಅಧಿಕಾರೇತರ ಸದಸ್ಯರುಗಳು ಬೆಂಗಳೂರಿನಲ್ಲಿ ನಡೆಯುವ SLDSC ಸಭೆಗಳಿಗೆ ಹಾಜರಾಗಲು ಅನುಕೂಲವಾಗುವಂತೆ ವಿಮಾನದ ಮೂಲಕ ಪ್ರಯಾಣ ಮಾಡಲು ಅನುಮತಿಯನ್ನು ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

3. ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಹೊರ ರಾಜ್ಯದಲ್ಲಿ ವಾಸಿಸುತ್ತಿರುವ SLDSC ಯ ಅಧಿಕಾರೇತರ ಸದಸ್ಯರುಗಳು ಬೆಂಗಳೂರಿನಲ್ಲಿ ನಡೆಯುವ SLDSC ಸಭೆಗಳಿಗೆ ಹಾಜರಾಗುವ ಸಮಯದಲ್ಲಿ ವಿಮಾನ ಪ್ರಯಾಣಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಜಸಂಇ 06 ಅಭಯೋ 2010, ಬೆಂಗಳೂರು, ದಿನಾಂಕ : 12ನೇ ಜುಲೈ, 2010**

1. ಹೊರ ರಾಜ್ಯದಲ್ಲಿ ವಾಸಿಸುತ್ತಿರುವ ರಾಜ್ಯ ಮಟ್ಟದ ಅಣೆಕಟ್ಟು ಸುರಕ್ಷತಾ ಸಮಿತಿ (SLDSC) ಯ ಅಧಿಕಾರೇತರ ಸದಸ್ಯರಾದ ಶ್ರೀಯುತ ಬಿ.ಎಂ. ರಾಮೇಗೌಡ, ನಿವೃತ್ತ ಜಂಟಿ ನಿರ್ದೇಶಕರು, ಪುಣೆ ಇವರು ಬೆಂಗಳೂರಿನಲ್ಲಿ ನಡೆಯುವ ಸಮಿತಿ ಸಭೆಗಳಿಗೆ ಹಾಜರಾಗುವ ಸಂದರ್ಭಗಳಲ್ಲಿ ವಿಮಾನದಲ್ಲಿ (Economy Class) ಪ್ರಯಾಣಿಸುವ ಸೌಲಭ್ಯವನ್ನು ಒದಗಿಸಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ. ಈ ಸಂಬಂಧದ ಬಿಲ್ಲುಗಳನ್ನು ನಿರ್ದೇಶಕರು, ಕರ್ನಾಟಕ ಇಂಜಿನಿಯರಿಂಗ್ ಸಂಶೋಧನಾ ಕೇಂದ್ರ ಕೃ.ರಾ. ಸಾಗರ ರವರು ಪಾವತಿಸಲು ಕ್ರಮ ಕೈಗೊಳ್ಳತಕ್ಕದ್ದು.

2. ಈ ಮೇಲಿನ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಜಸಂಇ 03 ಅಭಯೋ 2008 ಬೆಂಗಳೂರು, ದಿನಾಂಕ 07–01–2009 ಹಾಗೂ ದಿನಾಂಕ 01–09–2009 ರೊಡನೆ ಓದಿಕೊಳ್ಳುವುದು.

3. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಲೋಇ/445/ಆಕೋ–2/10 ದಿನಾಂಕ 08–07–2010 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್. ಪರಶುರಾಮ್**
ಸರ್ಕಾರದ ಉಪ ಕಾರ್ಯದರ್ಶಿ (ಕೆ.ಬಿ.ಜೆ.ಎನ್)
ಜಲಸಂಪನ್ಮೂಲ ಇಲಾಖೆ

ಪಿ. ಆರ್. 1917

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಗೆ ಲೇಖನ ಸಾಮಗ್ರಿಗಳ ಸರಬರಾಜು ಮಾಡಿರುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 4 ಡಿಎಸ್‌ವೈ 2010 ದಿನಾಂಕ 13.05.2010.
2. ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಶಾಖೆಗಳ ಮನವಿ.
3. ದಿನಾಂಕ 06–07–2010ರ ಸರ್ಕಾರದ ಪತ್ರ ಕಸಂವಾಪ್ರ 115 ಸ್ವೀಮರ 2010.
4. ದಿನಾಂಕ 13–07–2010ರ ರವಿ ಏಜೆನ್ಸೀಸ್‌ರವರ ಪತ್ರ ಸಂಖ್ಯೆ: ಆರ್.ಎ. 137/ಕ್ಯೂ1/10.

**ಪ್ರಸ್ತಾವನೆ :**

ಮೇಲೆ ಓದಲಾದ (2)ರ ಮನವಿಗಳಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಹಾಗೂ ಪ್ರವಾಸೋದ್ಯಮ ಇಲಾಖೆಯ ವಿವಿಧ ಶಾಖೆಗಳು ಲೇಖನ ಸಾಮಗ್ರಿಗಳಿಗಾಗಿ ಮನವಿ ಸಲ್ಲಿಸಿದ್ದವು.

ಮೇಲೆ ಓದಲಾದ (3)ರ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಗೆ ಬೇಕಾಗಿರುವ ಲೇಖನ ಸಾಮಗ್ರಿಗಳನ್ನು ಖರೀದಿಸಲು 03 ಕಂಪನಿಗಳಿಂದ ದರಪಟ್ಟಿ ನೀಡುವಂತೆ ಕೋರಲಾಗಿತ್ತು. ಹಾಗೂ ಅದರಂತೆ 03 ಕಂಪನಿಗಳಿಂದ ಸ್ವೀಕೃತವಾದ ದರಪಟ್ಟಿಯನ್ವಯ ಇಲಾಖೆಗೆ ಅಗತ್ಯವಾಗಿ ಬೇಕಾಗುವ ಸಾಮಗ್ರಿಗಳ ಒಟ್ಟು ದರಪಟ್ಟಿಯು ಈ ಕೆಳಗಿನಂತಿರುತ್ತದೆ. ಹಾಗೂ 3 ಕಂಪನಿಗಳ ಲೇಖನ ಸಾಮಗ್ರಿಗಳ ದರ ಪಟ್ಟಿಯನ್ನು ಅನುಬಂಧದಲ್ಲಿ ನೀಡಲಾಗಿದೆ.

| ಕ್ರ.ಸಂ. | ಕಂಪನಿಯ ಹೆಸರು | ವಿವರ | ಪ್ರಮಾಣ | ಬೆಲೆ ರೂ.ಗಳಲ್ಲಿ | ಒಟ್ಟು ರೂ.ಗಳಲ್ಲಿ |
|---|---|---|---|---|---|
| 1 | ರವಿ ಏಜೆನ್ಸೀಸ್ | ಲೇಖನ ಸಾಮಗ್ರಿಗಳು | ಅನುಬಂಧದಲ್ಲಿ ಲಗತ್ತಿಸಲಾಗಿದೆ | | 24045–00 |
| 2 | ಶಂಕರ್ ಪಿ. ಮಾರ್ಟ್ | ಲೇಖನ ಸಾಮಗ್ರಿಗಳು | | | 25065–00 |
| 3 | ಜನತಾ ಬಜಾರ್ | ಲೇಖನ ಸಾಮಗ್ರಿಗಳು | | | 26493–48 |

ಈ ಮೇಲ್ಕಂಡ 03 ಕಂಪನಿಗಳಿಂದ ಪಡೆದ ದರಗಳನ್ನು ಅವಲೋಕಿಸಿ ಅತಿ ಕಡಿಮೆ ದರ ನೀಡಿರುವ ಬೆಂಗಳೂರಿನ ಅವೆನ್ಯೂ ರಸ್ತೆಯಲ್ಲಿರುವ ರವಿ ಏಜೆನ್ಸೀಸ್, # 448, ಬೆಂಗಳೂರು–560001 ರವರಿಗೆ ರೂ.24045–00 ಗಳ (ಇಪ್ಪತ್ತನಾಲ್ಕು ಸಾವಿರದ ನಲವತ್ತೈದು ರೂ.ಗಳು ಮಾತ್ರ) ವೆಚ್ಚದಲ್ಲಿ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡಲು ಈ ಕೆಳಕಂಡಂತೆ ಆದೇಶಿಸಿದೆ. ದರಪಟ್ಟಿಯು ವ್ಯಾಟ್ ತೆರಿಗೆ ಹಾಗೂ ಸಾಗಾಣೆ ವೆಚ್ಚಗಳನ್ನು ಒಳಗೊಂಡಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 115 ಸ್ವೀಮರ 2010, ಬೆಂಗಳೂರು, ದಿನಾಂಕ : 19ನೇ ಜುಲೈ, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯಲ್ಲಿರುವ ಶಾಖೆಗಳಿಗೆ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡಲು 03 ಕಂಪನಿಗಳಿಂದ ದರಪಟ್ಟಿಗಳನ್ನು ಕರೆದಿದ್ದು ಅನುಬಂಧದಲ್ಲಿರುವ ಲೇಖನ ಸಾಮಗ್ರಿಗಳಿಗೆ ಅತಿ ಕಡಿಮೆ ದರ ರೂ 24045–00 ಗಳ (ಇಪ್ಪತ್ತನಾಲ್ಕು ಸಾವಿರದ ನಲವತ್ತೈದು ರೂ. ಗಳು ಮಾತ್ರ) ಗಳನ್ನು ಸೂಚಿಸಿರುವ ಬೆಂಗಳೂರಿನ ಅವೆನ್ಯೂ ರಸ್ತೆಯ # 448, ರವಿ ಏಜೆನ್ಸೀಸ್ ರವರಿಗೆ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡಲು ಆದೇಶ ನೀಡಿದೆ.

ಈ ವೆಚ್ಚವನ್ನು ಸರ್ಕಾರ ಆದೇಶ ಸಂಖ್ಯೆ: ಸಿಆಸುಇ 4 ಡಿಎಸ್‌ವೈ 2010, ದಿನಾಂಕ 13–05–2010ರಲ್ಲಿ ನೀಡಿರುವ ಆದೇಶದನ್ವಯ ಲೆಕ್ಕ ಶೀರ್ಷಿಕೆ 2052–00–090–0–01–051 (ಸಾಮಾನ್ಯ ವೆಚ್ಚಗಳು) (ಯೋಜನೇತರ ಅಡಿಯಲ್ಲಿ ಭರಿಸಲು ರವಿ ಏಜೆನ್ಸೀಸ್ ಕಂಪನಿಗೆ ರೂ. 24045–00 ಗಳ (ಇಪ್ಪತ್ತನಾಲ್ಕು ಸಾವಿರದ ನಲವತ್ತೈದು ರೂ.ಗಳು ಮಾತ್ರ) ಮೊತ್ತವನ್ನು ಸಿಆಸುಇ ಲೆಕ್ಕ ಪತ್ರ ಶಾಖೆಯು ಡಿ.ಸಿ.ಬಿಲ್ ಮೂಲಕ ಬಿಡುಗಡೆ ಮಾಡುವುದು.

ರವಿ ಏಜೆನ್ಸೀಸ್ ಕಂಪನಿಯು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯಲ್ಲಿರುವ ಶಾಖೆಗಳಿಗೆ ಕೂಡಲೇ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡುವುದು ಹಾಗೂ ಸಿಆಸು ಇಲಾಖೆಯಿಂದ ನೀಡುವ ಮೊತ್ತಕ್ಕೆ ಸ್ವೀಕೃತಿ ನೀಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

## ANNEXURE
## Comparative Statement

| S.No. | Particulars | Qty | Ravi Agencies | Shankar Agencies | Janatha Bajar |
|---|---|---|---|---|---|
| 1 | ಪ್ರಿಂಟರ್ ಕಾಟ್ರಿಜ್ (Phaser - 3124) | 02 | 10546–20 | 10605–00 | 11281–00 |
| 2 | ಜೆರಾಕ್ಸ್ ಪೇಪರ್ (A-4) | 10 | 1554–00 | 1617–00 | 1764–00 |
| 3 | L Shape Plastic Folders | 30 | 323–00 | 340–50 | 480–60 |
| 4 | ಫ್ಯಾಕ್ಸ್ ರೋಲ್ | 50 | 4095–00 | 4725–00 | 4880–50 |
| 5 | ಜೆರಾಕ್ಸ್ ಮಿಷಿನ್ ಟೋನರ್ (Work center 5020) | 01 | 2213–00 | 2267–30 | 2470–00 |
| 6 | ಬಾಕ್ಸ್ ಫೈಲ್ (Lever file) | 05 | 272–40 | 295–10 | 329–00 |
| 7 | ಜೆರಾಕ್ಸ್ ಮಿಷಿನ್ ಟೋನರ್ (Richo FT 4621) | 01 | 3002–00 | 3064–50 | 3607–00 |
| 8 | TVS 355 Printer Ribbon | 02 | 346–50 | 385–90 | 236–00 |
| 9 | ಜೆಲ್ ಪೆನ್ | 05 | 147–00 | 152–25 | 152–00 |
| 10 | ಸ್ಕೆಚ್ ಪೆನ್ | 02 | 37–75 | 39–90 | 39–90 |
| 11 | Writing Pad | 03 | 493–72 | 527–77 | 59–85 |
| 12 | ಪೆನ್ ಸ್ಟ್ಯಾಂಡ್ | 02 | 186–14 | 110–30 | **401–79** |
| 13 | ಸೆಲೋಪಿನ್ ಟೇಪ್ | 02 | 12–60 | 13–65 | 13–44 |
| 14 | ಸ್ಟ್ಯಾಪ್ಲರ್ ಪಿನ್ (ದೊಡ್ಡದು) | 06 | 306–45 | 344–50 | 354–00 |
| 15 | ಸ್ಟ್ಯಾಪ್ಲರ್ ಪಿನ್ (ಚಿಕ್ಕದು) | 08 | 45–40 | 49–94 | 49–00 |
| 16 | ರೆಡ್ ಇಂಕ್ ಪೆನ್ | 02 | 94–50 | 100–80 | 12–20 |
| 17 | Calling bell (wire less) | 01 | 368–87 | 425–62 | 363–20 |
| | **ಒಟ್ಟು** | | **24045–00** | **25065–03** | **26493–48** |

Ravi Agencies - 24045-00
Shankar Agencies - 25065-03
Janatha Bajar - 26493-48

ಎಂ.ಕೆ. ಧರ್ಮರಾಜಪ್ಪ
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

ಪಿ. ಆರ್. 1918

## COMMERCE AND INDUSTRIES SECRETARIAT

**Sub :** Approval to the Project Proposal of M/s. Global Eco Hotels, to establish a "Eco Hotel with Wellness Spa and Tourism Services" in Kannur Village and Harekal Village (Katti Kudru Island), Mangalore Taluk, Dakshina Kannada District.

**Read :** Proceedings of the 23rd State High Level Clearance Committee (SHLCC) Meeting held on 19-06-2010.

**PREAMBLE :**

M/s. Global Eco Hotels, proposes to establish a "Eco Hotel with Wellness Spa and Tourism Services' in Kannur Village and Harekal Village (Katti Kudru Island), Mangalore Taluk, Dakshina Kannada District, with an investment of Rs. 90 crores, generating employment to about 300 persons.

In the 23rd State High Level Clearance Committee (SHLCC) Meeting held on 19-06-2010, the proposal of the Company was discussed and approved.

Government has examined the recommendations made by the State High Level clearance Committee in its 23rd Meeting held on 19-06-2010, in all aspects.

Hence the following Order.

**GOVERNMENT ORDER NO. CI 367 SPI 2010, BANGALORE DATED: 15TH JULY 2010.**

Government is pleased to accord in principle approval to the Project Proposal of M/s. Global Eco Hotels, to establish a "Eco Hotel with Wellness Spa and Tourism Services" in Kannur Village and Harekal Village (Katti Kudru Island). Mangalore Taluk, Dakshina Kannada District, with an investment of Rs. 90 crores, generating employment to about 300 persons and extend the following infrastructure facilities, incentives and concessions.

**INFRASTRUCTURE FACILITIES**:

1. **Land:** 170 acres at Kannur village and Harekal Village (Katti Kudru Island), Mangalore taluk, Dakshina Kannada District excluding the Government land to be purchased U/s 109 of KLR Act and conversion of the same for industrial use.
2. **Water:** 100 KLPD from own source.
3. **Power:** 1000 KVA to be serviced by MESCOM.
4. **Incentives & Concessions:** As per prevailing Tourism Policy of the State.

**GENERAL TERMS AND CONDITIONS:**

1. **Environment:** The promoters to obtain CFE and CFO from KSPCB and environmental clearance from MOEF, GOI.
2. **Employment:** The Company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Government of Karnataka. A copy of Human Resources Development plan shall be sent to the Commissioner for I.D. and Director of Industries and Commerce for monitoring.
3. **Vendor Development:** Wherever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. and Director of Industries and Commerce for monitoring.
4. **Social Infrastructure Development:** The Company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. and Director of Industries and Commerce for monitoring.
5. **Others:**
   a) The project proponents shall provide employment to at least one member of the family of each land looser as the land is being acquired through KIADB.
   b) The project proponents shall adopt rainwater harvesting, waste water recycling and water conservation techniques. Zero discharge facility should be adopted wherever applicable.
   c) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

This approval is valid for a period of two years from the date of issue.

By Order and in the name of the Governor of Karnataka,

**APARNA PAVATE**

Desk Officer (Technical Cell)

Commerce and Industries Department

P.R.1919

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಕೆ. ಪ್ರಭಾಕರ, ಸೇವಾನಿರತ ಪಿ.ಎಸ್.ಐ. ರವರ ಖಾಯಂಪೂರ್ವ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ 10/ಸಿಬ್ಬಂದಿ–1/2008–09 ದಿನಾಂಕ 12–11–2008, 04–06–2009 ಮತ್ತು 22–04–2010.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರಗಳಲ್ಲಿ ಶ್ರೀ ಕೆ. ಪ್ರಭಾಕರ, ಸೇವಾನಿರತ ಪಿ.ಎಸ್.ಐ. ರವರು ದಿನಾಂಕ 15–12–2003ರಂದು ಪಿ.ಎಸ್.ಐ. ಆಗಿ ನೇಮಕಗೊಂಡು 2 1/2 ವರ್ಷಗಳ ಪ್ರೊಬೇಷನರಿ ಅವಧಿಯನ್ನು ದಿನಾಂಕ 14–06–2006ಕ್ಕೆ ಪೂರೈಸಿರುತ್ತಾರೆ. ಸದರಿ ಹುದ್ದೆಗೆ ನಿಗಧಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರುತ್ತಾರೆ. ಆದರೆ ಇವರ ವಿರುದ್ಧ ಚಾಲ್ತಿ ಶಿಕ್ಷೆಗಳಿದ್ದುದರಿಂದ ಸದರಿಯವರ ಖಾಯಂ ಪೂರ್ವ ಅವಧಿಯನ್ನು ಒಂದು ವರ್ಷ ಮೂರು ತಿಂಗಳವರೆಗೆ ಅಂದರೆ ದಿನಾಂಕ 15–06–2006 ರಿಂದ 14–09–2007ರ ವರೆಗೆ ಐ.ಜಿ.ಪಿ. ದಕ್ಷಿಣ ವಲಯ, ಮೈಸೂರು ರವರು ವಿಸ್ತರಿಸಿರುತ್ತಾರೆ.

ಸದರಿ ಅಧಿಕಾರಿಯವರು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4 ಮತ್ತು 5(1) ರನ್ವಯ ಹೊಂದಿರುವ ಪಿ.ಎಸ್.ಐ. ಹುದ್ದೆಯಲ್ಲಿ ಕಾರ್ಯಭಾರವನ್ನು ನಿರ್ವಹಿಸಲು ಸಮರ್ಥರಾಗಿರುತ್ತಾರೆ ಎಂದು ತಿಳಿಸಲಾಗಿರುತ್ತದೆ. ಇವರ ವಿರುದ್ಧದ ಶಿಕ್ಷೆಯು

ದಿನಾಂಕ 31-03-2008ಕ್ಕೆ ಕೊನೆಗೊಳ್ಳುವುದರಿಂದ, ಇವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ 15-09-2007 ರಿಂದ 31-03-2008ರ ವರೆಗೆ ವಿಸ್ತರಿಸುವಂತೆ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 23 ಪೊಸಇ 2009, ಬೆಂಗಳೂರು, ದಿನಾಂಕ : 29ನೇ ಜುಲೈ, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರಿ) ನಿಯಮಾವಳಿಗಳು, 1977ರ ನಿಯಮ 4(1) (i) ರನ್ವಯ ಶ್ರೀ ಕೆ. ಪ್ರಭಾಕರ, ಸೇವಾನಿರತ ಪಿ.ಎಸ್.ಐ. ಇವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ 15-09-2007 ರಿಂದ 31-03-2008ರ ವರೆಗೆ ವಿಸ್ತರಿಸಿ ಸರ್ಕಾರವು ಆದೇಶಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ. (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗಧಿಪಡಿಸುವುದು. ಹೀಗೆ ನಿಗಧಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎಸ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1920

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆ, ಹೆಚ್.ಬಿ. ಹಳ್ಳಿ, ತಾಲ್ಲೂಕು ಬೆಣಕಲ್ ಸಣ್ಣ ನೀರಾವರಿ ಕೆರೆ ನೀರಾವರಿ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 02-02-2010 ರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2009-10/896.

**ಪ್ರಸ್ತಾವನೆ :**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬಳ್ಳಾರಿ ಜಿಲ್ಲೆ, ಹೆಚ್.ಬಿ.ಹಳ್ಳಿ ತಾಲ್ಲೂಕು ಬೆಣಕಲ್ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬೆಣಕಲ್ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ :

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 05-12-1996.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 01.07.1998.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1) ರಡಿ ಹೊಸಪೇಟೆ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯು ಪತ್ರ ಸಂಖ್ಯೆ : ಆರ್‌ಡಿ 179 ಎಲ್‌ಸಿಜಿ 2008, ದಿನಾಂಕ 29-07-2008 ರಲ್ಲಿ ಅಭಿಪ್ರಾಯ ನೀಡಿದೆ. ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ :

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಬೆಣಕಲ್ ಗ್ರಾಮದ ಸ.ನಂ. | ವಿಸ್ತೀರ್ಣ ಎ-ಸೆಂಟ್ಸ್ | ಪರಿಹಾರ ಮೊತ್ತ ರೂ.ಗಳಲ್ಲಿ. |
|---|---|---|---|---|
| 1 | 13/2000 | 669/2ಪಿ | 3.30 | 11,32,354-00 |
| 2 | 24/2000 | 669/2ಪಿ | 1.70 | |
| 3 | 25/2000 | 464/4 | 1.24 | |
| 4 | 26/2000 | 447/2 | 2.00 | |
| | | 475/2 | 3.57 | |
| | | 466/1 | 2.00 | |
| | | 455/2ಪಿ | 0.55 | |
| | **ಒಟ್ಟು** | | | **11,32,354-00** |

*** ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂ : ಸನೀಇ 45 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ : 28–07–2010**

ಬಳ್ಳಾರಿ ಜಿಲ್ಲೆ, ಹೆಚ್.ಬಿ. ಹಳ್ಳಿ, ತಾಲ್ಲೂಕು ಬೆಣಕಲ್ ಸಣ್ಣ ನೀರಾವರಿ ಕೆರೆ ನೀರಾವರಿ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬೆಣಕಲ್ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.11,32,354–00 ಗಳನ್ನು (ಹನ್ನೊಂದು ಲಕ್ಷದ ಮೂವತ್ತೆರಡು ಸಾವಿರದ ಮುನ್ನೂರ ಐವತ್ನಾಲ್ಕು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು– ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–05–2008 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಹೆಚ್.ಎಸ್. ಉದಯಕುಮಾರ್),**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 2035

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಬೋರಗಲ್ಲ ಸಣ್ಣ ನೀರಾವರಿ ಜಿನುಗು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 04–01–2010 ರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2009–10/44.

**ಪ್ರಸ್ತಾವನೆ :**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಬೋರಗಲ್ಲ ಸಣ್ಣ ನೀರಾವರಿ ಜಿನಗು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬೋರಗಲ್ಲ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ. 16,76,467–00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ :

– ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 29–05–1997.
– ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 01.04.2000.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1) ರಡಿ ಹುಕ್ಕೇರಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ : ಲಾ 1477 ಎಲ್‌ಬಿಎಸ್ 2007, ದಿನಾಂಕ 27–08–2007 ರಲ್ಲಿ ಅಭಿಪ್ರಾಯ ನೀಡಿದೆ. ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ :

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಬೋರಗಲ್ಲ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ ರೂ.ಗಳಲ್ಲಿ. |
|---|---|---|---|---|
| 1 | 166/03 | 292/6+7+8ಸಿ | 2.–06 | 16,76,467–00 |
| | | 292/4 | 0–06 | |
| | | 292/9 | 2–01 | |
| | ಒಟ್ಟು | | | **16,76,467–00** |

*** ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂ : ಸನೀಇ 25 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ : 28–07–2010**

ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಬೋರಗಲ್ಲ ಸಣ್ಣ ನೀರಾವರಿ ಜಿನುಗು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬೋರಗಲ್ಲ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ

ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ. 16,76,467–00 ಗಳನ್ನು (ಹದಿನಾರು ಲಕ್ಷದ ಎಪ್ಪತ್ತಾರು ಸಾವಿರದ ನಾನೂರ ಅರವತ್ತೇಳು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–05–2008 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಹೆಚ್.ಎಸ್. ಉದಯಕುಮಾರ್),**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 2036

## HOME SECRETARIAT

**Sub :-** Attestation of original documents – delegation of powers to the Deputy Commissioner & District Magistrate, Dakshina Kannada District and Deputy Commissioner & District Magistrate, Udupi District – reg.

**Read :-** 1. Government Order No. HD : 325 : PMS : 2010, dated 02-07-2010.

2. Letter No. MAG (2) /CR.168/10-11/26346/C4, dated 24-7-2010, from the Deputy Commissioner & District Magistrate, Dakshina Kannada District.

**Preamble:**

In Government Order read at (1) above, the State Government has delegated the powers of attestation of original documents only relating to the claims/benefits abroad in respect of the victims of the Air crash on 22-05-2010 in Mangalore, pertaining to Dakshina Kannada District and Udupi District, to the Deputy Commissioner & District Magistrate, Dakshina Kannada District and Deputy Commissioner & District Magistrate, Udupi District respectively for a temporary period of one month with effect from 5th July 2010 to 4th August 2010.

Now, the Deputy Commissioner & District Magistrate, Dakshina Kannada District has in his letter read at (2) above, has stated that out of the 158 victims only in few such cases, documents relating to the claims of the said victims have been received so far and some of the families/relatives of the victims are residing in foreign countries/other States in India. Therefore, he has requested to extend the period of powers delegated to the Deputy Commissioners of Dakshina Kannada District and Udupi District for this purpose, by one more month i.e., from 05-08-2010 to 04-09-2010 so as to facilitate the families/relatives of the victims under reference to get their aforesaid documents attested. Further, he has also stated that due to his official tours and in order to avoid delay in attestion of documents, he has requested to delegate these powers of attestation of the aforesaid documents to the Additional Deputy Commissioner & Additional District Magistrate, Dakshina Kannada District. The proposal of the Deputy Commissioner & District Magistrate, Dakshina Kannada District, has been examined in detail as per the guidelines of Government of India issued in letter No. 18-4/2004-NS-II, dated 14-09-2005, regarding attestation of original documents. According to these instructions, the powers of attestation of original documents cannot be delegated to the Additional Deputy Commissioner and Additional District Magistrate, Dakshina Kannada District. However, the State Government has decided to extend the period of powers delegated in Government Order No. HD 325 PMS 2010, dated 02-07-2010 to the Deputy Commissioner & District Magistrates of Dakshina Kannada District and Udupi District, which expires on 04-08-2010, by one more month, i.e. upto 04-09-2010, in order to clear the pending cases of attestation of original documents relating to victims of the Air crash on 22-05-2010 in Mangalore pertaining to Dakshina Kannada District and Udupi District. Hence, this Order.

**Government Order No. HD : 325 : PMS : 2010, Bangalore, dated : 2-08-2010**

In the circumstances explained in the preamble and in continuation of the Government Order No. HD 325 PMS 2010, dated 02-07-2010, wherein powers were delegated for a temporary period upto 04-08-2010 for attestation of original documents relating to the claims / benefits abroad in respect of the victims of the Air crash on 22-05-2010 in Mangalore pertaining to Dakshina Kannada District and Udupi District to the Deputy Commissioner & District Magistrate, Dakshina Kannada District and Deputy Commissioner & District Magistrate, Udupi District respectively, the State Government is pleased to extend the period of delegated powers to these officers for a further period from 05-08-2010 to 04-09-2010 only.

By Order and in the name of the Governor of Karnataka,

**(ALICE GONSALVES)**

Under Secretary to Government,

Home Department (Passport and Foreigners).

PR. 2037

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಶಿವಣ್ಣ, ಸಹಾಯಕ ಅಧೀಕ್ಷಕರು, ಕಾರಾಗೃಹ ಇಲಾಖೆ, ಇವರ ಮೇಲಿನ ಟ್ರ್ಯಾಪ್ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ :**

1) ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ : ವಿಚಾರಣೆ : ಸಿಆರ್-41/2009-10, ದಿನಾಂಕ 20-11-2009.
2) ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ : ವಿಚಾರಣೆ : ಸಿಆರ್-41/2009-10, ದಿನಾಂಕ 04-12-2009.
3) ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 25 ಪಿಆರ್‌ಇ 2010, ದಿನಾಂಕ 19-4-2010.
4) ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ : ವಿಚಾರಣೆ : ಸಿಆರ್-41/2009-10, ದಿನಾಂಕ 20-05-2010.

* * *

**ಪ್ರಸ್ತಾವನೆ :**

ಕರ್ನಾಟಕ ಕಾರಾಗೃಹಗಳ ಇಲಾಖೆಯ ಅಧಿಕಾರಿಯಾದ ಶ್ರೀ ಶಿವಣ್ಣ ರವರು ಶಿವಮೊಗ್ಗ ಜಿಲ್ಲಾ ಕಾರಾಗೃಹದಲ್ಲಿ ಸಹಾಯಕ ಅಧೀಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದರು. ದಿನಾಂಕ : 17-11-2009 ರಂದು ಫಿರ್ಯಾದುದಾರರಾದ ಶ್ರೀಮತಿ ಸುಶೀಲಮ್ಮ ಕೋಂ ಲೇಟ್ ಯಲ್ಲಪ್ಪ, ಶಿವಮೊಗ್ಗ ಇವರು ಶಿವಮೊಗ್ಗ ಠಾಣೆಗೆ ಹಾಜರಾಗಿ, ಶ್ರೀ ಶಿವಣ್ಣ, ಸಹಾಯಕ ಅಧೀಕ್ಷಕರು, ಶಿವಮೊಗ್ಗ ಜಿಲ್ಲಾ ಕಾರಾಗೃಹ, ಇವರ ವಿರುದ್ಧ ದೂರು ನೀಡಿರುತ್ತಾರೆ. ಇವರು ನೀಡಿದ ದೂರಿನ ಸಾರಾಂಶವೇನೆಂದರೆ, ಫಿರ್ಯಾದುದಾರರಾದ ಶ್ರೀಮತಿ ಸುಶೀಲಮ್ಮರವರ ಇಬ್ಬರು ಮಕ್ಕಳು ವಿವಿಧ ಕೇಸುಗಳಲ್ಲಿ ಜೈಲಿನಲ್ಲಿದ್ದಾರೆ. ಅದರಲ್ಲಿ ಒಬ್ಬ ಮಗ ಆನಂದ್ ಎಂಬುವವರನ್ನು ಈಗ್ಗೆ ಎರಡು ವರ್ಷಗಳ ಹಿಂದೆ ಧಾರವಾಡ ಜೈಲಿಗೆ ವರ್ಗಾಯಿಸಲಾಗಿದ್ದು, ಇನ್ನೊಬ್ಬ ಮಗ ಶ್ಯಾಮ ಗಾಂಜಾ ಕೇಸಿನಲ್ಲಿ ಅರೆಸ್ಟ್ ಆಗಿದ್ದಾರೆ. ಈ ಬಗ್ಗೆ ಅಧೀಕ್ಷಕರಾದ ಶ್ರೀ ಶಿವಣ್ಣ ಇವರು ಶ್ರೀ ಶ್ಯಾಮನನ್ನು ಸಹ ಬೇರೆ ಜೈಲಿಗೆ ಕಳುಹಿಸುತ್ತೇನೆಂದು ಇಲ್ಲದಿದ್ದರೆ ರೂ.2000-00ಗಳ ಲಂಚಕ್ಕಾಗಿ ಒತ್ತಾಯಿಸಿದ್ದು, ಫಿರ್ಯಾದಿಯು ಅವರ ಮಗನನ್ನು ಬೇರೆ ಜೈಲಿಗೆ ಕಳುಹಿಸಬೇಡಿ ಎಂದು ಅವರಲ್ಲಿದ್ದ ರೂ.1,000-00 ಗಳನ್ನು ಕೊಟ್ಟಿರುತ್ತಾರೆ. ಶ್ರೀ ಶಿವಣ್ಣನವರು ಇನ್ನೂ ರೂ.1,000-00 ಕ್ಕೆ ಒತ್ತಾಯಿಸಿದ್ದರಿಂದ ಫಿರ್ಯಾದಿಗೆ ಲಂಚ ಕೊಡಲು ಇಷ್ಟವಿಲ್ಲದ ಕಾರಣ ಸದರಿ ಅಧಿಕಾರಿಯ ಮೇಲೆ ಸೂಕ್ತ ಕ್ರಮ ಜರುಗಿಸಲು ಕೋರಿರುತ್ತಾರೆ. ಸದರಿಯವರು ನೀಡಿದ ದೂರಿನ ಆಧಾರದ ಮೇರೆಗೆ ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ, 1988ರ ಕಲಂ 7.13(1)(ಡಿ) ಸಹವಾಚ 13(2)ರ ಅಡಿಯಲ್ಲಿ ಮೊಕದ್ದಮೆ ಸಂಖ್ಯೆ : 4/2007 ನ್ನು ದಿನಾಂಕ 17-11-2009 ರಂದು ದಾಖಲಿಸಿಕೊಂಡು ತನಿಖೆಯನ್ನು ಕೈಗೊಂಡು ಪಂಚಸಾಕ್ಷಿಗಳೊಡನೆ ತನಿಖಾಧಿಕಾರಿ ಮತ್ತು ಅವರ ಸಿಬ್ಬಂದಿ ವರ್ಗದವರು ಬೀಸಿದ ಟ್ರ್ಯಾಪ್ ಬಲೆಯಲ್ಲಿ ಆರೋಪಿತ ಅಧಿಕಾರಿ ಶ್ರೀ ಶಿವಣ್ಣ ಇವರು ರೂ. 1,000-00 ಲಂಚದ ಹಣವನ್ನು ಫಿರ್ಯಾದುದಾರರಾದ ಶ್ರೀಮತಿ ಸುಶೀಲಮ್ಮ ಇವರಿಂದ ನೆರಳು ಸಾಕ್ಷಿದಾರರ ಸಮಕ್ಷಮ ಕೇಳಿ ಸ್ವೀಕರಿಸಿ ಲೋಕಾಯುಕ್ತ ಪೊಲೀಸರಿಗೆ ಸಿಕ್ಕಿಹಾಕಿಕೊಂಡಿರುತ್ತಾರೆ. ಆರೋಪಿತ ಅಧಿಕಾರಿಯಾದ ಶ್ರೀ ಶಿವಣ್ಣರವರ ಎರಡು ಹಸ್ತದ ಕೈಬೆರಳುಗಳನ್ನು ತಯಾರಿಸಿಟ್ಟಿದ್ದ ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಅದ್ದಿ ತೊಳೆಸಿದಾಗ, ದ್ರಾವಣ ಬಣ್ಣ ಬದಲಾಗಿ ಆಪಾದಿತ ಅಧಿಕಾರಿಯು ಲಂಚದ ಹಣವನ್ನು ಸ್ವೀಕರಿಸಿರುವುದು ದೃಢಪಟ್ಟಿರುತ್ತದೆ. ಲಂಚದ ಹಣವನ್ನು ಯಥಾವತ್ತಾಗಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ. ಸಾಕ್ಷಿದಾರರು ಫಿರ್ಯಾದುದಾರರಿಂದ ಶ್ರೀ ಶಿವಣ್ಣ, ಸಹಾಯಕ ಅಧೀಕ್ಷಕರು, ಜಿಲ್ಲಾ ಕಾರಾಗೃಹ, ಶಿವಮೊಗ್ಗ ಇವರು ಲಂಚದ ಹಣವನ್ನು ಕೇಳಿ ಸ್ವೀಕರಿಸಿದ ಅಂಶದ ಬಗ್ಗೆ ಸ್ಪಷ್ಟವಾಗಿ ಹೇಳಿರುತ್ತಾರೆ. ಈ ಎಲ್ಲಾ ಅಂಶಗಳಿಂದ ಆಪಾದಿತ ಸರ್ಕಾರಿ ಅಧಿಕಾರಿಯವರು ಲಂಚದ ಹಣವನ್ನು ಸ್ವೀಕರಿಸಿರುವುದು ರುಜುವಾತಾಗಿದ್ದು, ಅವರ ಮೇಲೆ ಭ್ರಷ್ಟಾಚಾರದ ಆಪಾದನೆಯು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಈ ಪ್ರಕರಣಕ್ಕೆ ಸಂಬಂಧಿಸಿದಂತೆ, ಲೋಕಾಯುಕ್ತ ಪೊಲೀಸರು ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ಶಿವಣ್ಣ, ಸಹಾಯಕ ಅಧೀಕ್ಷಕರು, ಜಿಲ್ಲಾ ಕಾರಾಗೃಹ, ಶಿವಮೊಗ್ಗ ಇವರನ್ನು ದಸ್ತಗಿರಿ ಮಾಡಿ ಗೌ. ನ್ಯಾಯಾಲಯಕ್ಕೆ ಹಾಜರುಪಡಿಸಿ ಅವರ ವಿರುದ್ಧ ಎಸ್.ಪಿ.ಎಲ್.(ಪಿಸಿ) ಸಿಆರ್-13/2009, ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆಯ ಅಡಿಯಲ್ಲಿ ಅಧಿಪತ್ರ ಜಾರಿ ಮಾಡಿ ನ್ಯಾಯಾಂಗ ಬಂಧನಕ್ಕೆ ನೀಡಿದ್ದರು.

ಮೇಲೆ ಓದಲಾದ (1)ರ ಆದೇಶದಲ್ಲಿ, ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾನಿರೀಕ್ಷಕರವರು, ಶ್ರೀ ಶಿವಣ್ಣ ಇವರ ವಿರುದ್ಧ ಮುಂದೆ ಜರುಗತಕ್ಕ ಕ್ರಿಮಿನಲ್ ಮೊಕದ್ದಮೆಯ ವಿಚಾರಣೆಯನ್ನು ಕಾಯ್ದಿರಿಸಿ, 1957ರ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 10(8) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶಿವಣ್ಣರವರನ್ನು ದಸ್ತಗಿರಿ ಮಾಡಿದ ದಿನಾಂಕ 17-11-2009 ರಿಂದಲೇ ಪೂರ್ವಾನ್ವಯವಾಗುವಂತೆ ಅಮಾನತ್ತಿನಲ್ಲಿರಿಸಿ ಆದೇಶಿಸಿದ್ದರು.

ಮೇಲೆ ಓದಲಾದ (2)ರ ಆದೇಶದಲ್ಲಿ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾನಿರೀಕ್ಷಕರವರು, ತನಿಖೆಯ ವೇಳೆಯಲ್ಲಿ ಸದರಿ ಆಪಾದಿತ ಅಧಿಕಾರಿಯು ಹಸ್ತಕ್ಷೇಪ ಮಾಡುವ ಅಥವಾ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಸದರಿಯವರ ಹುದ್ದೆಯ ಹಕ್ಕನ್ನು ಚಿತ್ರದುರ್ಗ ಜಿಲ್ಲಾ ಕಾರಾಗೃಹಕ್ಕೆ ವರ್ಗಾಯಿಸಿ ಆದೇಶಿಸಿದ್ದರು.

ಅನಂತರ, ಮೇಲೆ ಓದಲಾದ (3) ರ ಆದೇಶದಲ್ಲಿ ಸರ್ಕಾರವು, ಅಮಾನತ್ತಿನಲ್ಲಿದ್ದ ಶ್ರೀ ಶಿವಣ್ಣ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 10(5)(ಸಿ) ರಲ್ಲಿ ಸರ್ಕಾರಕ್ಕೆ ಇರುವ ಅಧಿಕಾರವನ್ನು ಚಲಾಯಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಲವು ಷರತ್ತುಗಳಿಗೆ ಒಳಪಟ್ಟು ಅಮಾನತ್ತಿನಿಂದ ಬಿಡುಗಡೆಗೊಳಿಸಿ, ಚಾಮರಾಜನಗರ ಜಿಲ್ಲಾ ಕಾರಾಗೃಹದಲ್ಲಿ ಖಾಲಿ ಇರುವ ಸಹಾಯಕ ಅಧೀಕ್ಷಕ ಹುದ್ದೆಗೆ ನೇಮಿಸಲಾಗಿರುತ್ತದೆ.

ಶ್ರೀ ಶಿವಣ್ಣ, ಸಹಾಯಕ ಅಧೀಕ್ಷಕರು, ಇವರು ದಿನಾಂಕ 22-4-2010 ರಂದು ಚಾಮರಾಜನಗರ ಜಿಲ್ಲಾ ಕಾರಾಗೃಹದಲ್ಲಿ ಕರ್ತವ್ಯಕ್ಕೆ ಹಾಜರಾಗಿ ಸೇವೆ ಸಲ್ಲಿಸುತ್ತಿದ್ದರು.

ತರುವಾಯ, ಸರ್ಕಾರವು ಅಧಿಸೂಚನೆ ಸಂಖ್ಯೆ : ಹೆಚ್‌ಡಿ 47 ಪಿಆರ್‌ಇ 2010 ದಿನಾಂಕ 15-07-2010 ರಲ್ಲಿ ಸದರಿ ಅಧಿಕಾರಿಯನ್ನು ಚಾಮರಾಜನಗರ ಜಿಲ್ಲಾ ಕಾರಾಗೃಹದಿಂದ ತುಮಕೂರು ಜಿಲ್ಲಾ ಕಾರಾಗೃಹಕ್ಕೆ ವರ್ಗಾಯಿಸಿತು. ಅದರನ್ವಯ ಅವರು ತುಮಕೂರು ಜಿಲ್ಲಾ ಕಾರಾಗೃಹದ ಸಹಾಯಕ ಅಧೀಕ್ಷಕ ಹುದ್ದೆಯಲ್ಲಿ ದಿನಾಂಕ 21-07-2010 ರಿಂದ ಕರ್ತವ್ಯ ನಿರ್ವಹಿಸುತ್ತಿದ್ದಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾನಿರೀಕ್ಷಕರವರು, ಗೌ. ಕರ್ನಾಟಕ ಲೋಕಾಯುಕ್ತವು ಆರೋಪಿತ ಸರ್ಕಾರಿ ಅಧಿಕಾರಿಯಾದ ಶ್ರೀ ಶಿವಣ್ಣ, ಸಹಾಯಕ ಅಧೀಕ್ಷಕ, ಕಾರಾಗೃಹ ಇಲಾಖೆ, ಇವರ ವಿರುದ್ಧದ ಪ್ರಕರಣದಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ, 1988ರ ಕಲಂ 7, 13(1)(ಡ) ಸಹವಾಚ 13(2)ರ ಅಡಿಯಲ್ಲಿನ ಆಪಾದನೆಗಳು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಆದ್ದರಿಂದ ಸದರಿ ಆರೋಪಿತರು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಅರ್ಹರಿರುತ್ತಾರೆ. ಹಾಗಾಗಿ, ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ, 1988ರ ಕಲಂ 19(1)ರ ಅನ್ವಯ ಮಂಜೂರಾತಿಯನ್ನು ನೀಡಬೇಕೆಂದು ಕೋರಿರುತ್ತಾರೆಂದೂ, ಸಂಬಂಧಪಟ್ಟ ತನಿಖಾ ವರದಿಯನ್ನು, ದಾಖಲಾತಿ ಪತ್ರಗಳನ್ನು ಮತ್ತು ದಸ್ತಾವೇಜುಗಳನ್ನು ಸರ್ಕಾರಕ್ಕೆ ಸಲ್ಲಿಸುತ್ತಾ, ಶ್ರೀ ಶಿವಣ್ಣ, ಸಹಾಯಕ ಅಧೀಕ್ಷಕ, ಇವರು ಗ್ರೂಪ್–'ಬಿ' ವೃಂದಕ್ಕೆ ಸೇರಿದ ಅಧಿಕಾರಿಯಾಗಿದ್ದು, ಸದರಿಯವರಿಗೆ ಸರ್ಕಾರವು ನೇಮಕಾತಿ ಪ್ರಾಧಿಕಾರವಾಗಿರುವುದರಿಂದ ಅಭಿಯೋಜನಾ ಮಂಜೂರಾತಿಯನ್ನು ಸರ್ಕಾರವೇ ನೀಡಬೇಕೆಂದು ಕೋರಿ, ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾನಿರೀಕ್ಷಕರವರಾದ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಆರೋಪಿತ ಸರ್ಕಾರಿ ಅಧಿಕಾರಿ ಶ್ರೀ ಶಿವಣ್ಣ, ಸಹಾಯಕ ಅಧೀಕ್ಷಕ, ಇವರ ನೇಮಕಾತಿ ಪ್ರಾಧಿಕಾರ ಮತ್ತು ಶಿಸ್ತು ಪ್ರಾಧಿಕಾರವು ಸರ್ಕಾರವಾಗಿರುತ್ತದೆ. ಆರೋಪಿತ ಸರ್ಕಾರಿ ಅಧಿಕಾರಿಯಾದ ಶ್ರೀ ಶಿವಣ್ಣರವರು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ, 1988ರ ಕಲಂ 7 13(1)(ಡ) ಸಹವಾಚ 13(2)ರ ಅಡಿಯಲ್ಲಿ ಅಪರಾಧ ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಈ ಆದುದರಿಂದ, ಸದರಿಯವರನ್ನು ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯವೆಂದು ಸರ್ಕಾರವು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 62 ಪಿಆರ್‌ಇ 2010, ಬೆಂಗಳೂರು, ದಿನಾಂಕ : 02ನೇ ಆಗಸ್ಟ್ 2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ಶಿವಣ್ಣ, ಸಹಾಯಕ ಅಧೀಕ್ಷಕರು, ತುಮಕೂರು ಜಿಲ್ಲಾ ಕಾರಾಗೃಹ, ತುಮಕೂರು, ಇವರ ಸಕ್ಷಮ ಪ್ರಾಧಿಕಾರವಾದ ಸರ್ಕಾರವು, ಸದರಿಯವರು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ, 1988ರ ಕಲಂ 7, 13 (1)(ಡಿ) ಸಹವಾಚ 13(2)ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ, ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ, 1988ರ ಕಲಂ 19(1) ರ ಅನ್ವಯ ಸರ್ಕಾರವು ಮಂಜೂರಾತಿ ನೀಡಿದೆ.

ಆದ್ದರಿಂದ, ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಾವಳಿಗಳು, 1977ರ ನಿಯಮ 19(1)ರ ಅನ್ವಯ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ 02–08–2010 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಟಿ. ಕೃಷ್ಣಮೂರ್ತಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

ಪಿ.ಆರ್. 2038

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಹೆಚ್.ಎಸ್. ಸತೀಶ್‌ಕುಮಾರ್, ಸಿ.ಪಿ.ಸಿ. ಕೆಸ್ತೂರು ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ** :

1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ : ಸಿಬ್ಬಂದಿ (2) ಡಿಇ/16/2008–09 ಓ.ಬಿ. 94/09–10, ದಿನಾಂಕ 27–6–2009.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ : ಅಪೀಲು/44/2009–10 ಓ.ಬಿ. 43/2009–10, ದಿನಾಂಕ 10–11–2009.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 11–3–2010.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2)2/2010–11, ದಿನಾಂಕ 03–06–2010.

* * *

**ಪ್ರಸ್ತಾವನೆ :**

ಶ್ರೀ ಹೆಚ್.ಎಸ್. ಸತೀಶ್‌ಕುಮಾರ್, ಸಿ.ಪಿ.ಸಿ. ಇವರು ಕೆಸ್ತೂರು ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇನ್ನಿಬ್ಬರು ಸಿಬ್ಬಂದಿಗಳೊಂದಿಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ 8 ರೊಂದಿಗೆ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

"ಶ್ರೀ ರಾಮೇಗೌಡ, ಎ.ಹೆಚ್.ಸಿ.–48, ಡಿ.ಎ.ಆರ್. ಮಂಡ್ಯ, ಶ್ರೀ ಎಂ.ಎನ್. ಸಂಪತ್, ಸಿಪಿಸಿ–511 ಶ್ರೀರಂಗಪಟ್ಟಣ ಪೊಲೀಸ್ ಠಾಣೆ ಮತ್ತು ಶ್ರೀ ಹೆಚ್.ಎಸ್. ಸತೀಶ್‌ಕುಮಾರ್, ಸಿಪಿಸಿ–82, ರವರುಗಳನ್ನು ದಿನಾಂಕ 13–8–2008 ರಂದು ಆರೋಪಿ ನಿಂಗಶೆಟ್ಟಿ ಬಿನ್ ಸಿದ್ದಶೆಟ್ಟಿ ಎಂಬ ಆರೋಪಿಯನ್ನು ಮಾನ್ಯ ಸಿಜೆ (ಜೆ.ಡಿ.) ಜೆ.ಎಂ.ಎಫ್.ಸಿ. ಮಳವಳ್ಳಿ ನ್ಯಾಯಾಲಯಕ್ಕೆ ಹಾಜರುಪಡಿಸಲು ಆರ್.ಪಿ.ಐ., ಡಿ.ಎ.ಆರ್. ಮಂಡ್ಯರವರು ಬೆಂಗಾವಲು ಕರ್ತವ್ಯಕ್ಕೆ ನಿಯೋಜಿಸದ್ದು, ನೀವುಗಳು ಆರೋಪಿ ನಿಂಗಶೆಟ್ಟಿ ಬಿನ್ ಸಿದ್ದಶೆಟ್ಟರವನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿದ್ದು, ನಂತರ ಆರೋಪಿ ನಿಂಗಶೆಟ್ಟಿ ಬಿನ್ ಸಿದ್ದಶೆಟ್ಟಿ ಎಂಬ

ಆರೋಪಿಯನ್ನು ಮೂತ್ರ ವಿಸರ್ಜನೆಗೆ ಕರೆದುಕೊಂಡು ಹೋಗಿ ಮರದ ಮರೆಯಲ್ಲಿ ವಿಸರ್ಜನೆ ಮಾಡುವ ಸಮಯದಲ್ಲಿ ಆರೋಪಿಯು ಕೈಕೊಳ ಬಿಚ್ಚಿಕೊಂಡು ಬೆಂಗಾವಲು ಸಿಬ್ಬಂದಿಯವರ ವಶದಿಂದ ತಪ್ಪಿಸಿಕೊಂಡು ಪರಾರಿಯಾಗಲು ಕಾರಣರಾಗಿದ್ದು, ಈ ಸಂಬಂಧ ಮಳವಳ್ಳಿ ಪುರ ಪೊಲೀಸ್ ಠಾಣೆ ಅಪರಾಧ ಸಂ: 94/2008 ಕಲಂ 224 ಐಪಿಸಿ ರೀತ್ಯಾ ಪ್ರಕರಣ ದಾಖಲಾಗಿದ್ದು ಇದಕ್ಕೆ ನೀವುಗಳು ಅಧೀನ ಖೈದಿಗಳ ಬೆಂಗಾವಲು ಕರ್ತವ್ಯ ನಿರ್ವಹಿಸುವಲ್ಲಿ ತೋರಿದ ಅತೀವ ಕರ್ತವ್ಯ ನಿರ್ಲಕ್ಷ್ಯತೆ ಮತ್ತು ಬೇಜವಾಬ್ದಾರಿತನವೇ ಕಾರಣವಾಗಿರುತ್ತದೆ.”

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ : (1) ರಲ್ಲಿ ಓದಲಾದ ದಿನಾಂಕ 27–6–2009ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಎರಡು ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮುಂದೂಡಿದ್ದಾರೆ. ದಿನಾಂಕ 17–8–08 ರಿಂದ 05–9–2008ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ, ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮುಂದೂಡಿ, ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ 10–11–2009 ರಲ್ಲಿ ಆದೇಶಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸಬಹುದಾದಂತಹ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 49 ಪೊಸಿಅ 2010, ಬೆಂಗಳೂರು, ದಿನಾಂಕ : 30–7–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ಎಸ್. ಸತೀಶ್‌ಕುಮಾರ್, ಸಿ.ಪಿ.ಸಿ. ಕೆಸ್ತೂರು ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಟಿ.ಎನ್. ರವಿಪ್ರಕಾಶ್),**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 2039

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಜಿ. ದೇವರಾಜ್, ಪಿ.ಎಸ್.ಐ., ಸಂಚಾರಿ ಪೊಲೀಸ್ ಠಾಣೆ, ಶಿವಮೊಗ್ಗ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ : ಅಪೀಲು (1) 28/2006–07 ಓ.ಬಿ. 53/2009–10, ದಿನಾಂಕ 30–01–2010.
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 19–3–2010.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2)4/2010–11, ದಿನಾಂಕ 22–05–2010.

* * *

**ಪ್ರಸ್ತಾವನೆ :**

ಶ್ರೀ ಜಿ. ದೇವರಾಜ್, ಪಿ.ಎಸ್.ಐ., ಸಂಚಾರಿ ಪೊಲೀಸ್ ಠಾಣೆ, ಶಿವಮೊಗ್ಗ, ಇವರು ಚಿಕ್ಕನಾಯಕನಹಳ್ಳಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಮೇಲ್ಮನವಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಹಾಗೂ ಕರ್ತವ್ಯಲೋಪ ವೆಸಗಿದ ಕಾರಣದ ಮೇಲೆ ಇತರೆ ಇಬ್ಬರು ಸಿಬ್ಬಂದಿಗಳೊಂದಿಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ 8 ರೊಂದಿಗೆ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

**ಶ್ರೀ ಜಿ. ದೇವರಾಜ್, ಪಿ.ಎಸ್.ಐ. ಹಿಂದೆ ಚಿಕ್ಕನಾಯಕನಹಳ್ಳಿ ಠಾಣೆ ಹಾಲಿ ದೊಡ್ಡಪೇಟೆ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ**

“ದಿನಾಂಕ 08–12–04 ರಂದು ಚಿ.ನಾ.ಹಳ್ಳಿ ಠಾಣೆ, ಯು.ಡಿ.ಆರ್. ನಂ. 20/04 ಕಲಂ 174 ಸಿ.ಆರ್.ಪಿ.ಸಿ. ಪ್ರಕರಣಗಳಲ್ಲಿ ಪಿರ್ಯಾದುದಾರರಾದ ಶಿವಣ್ಣ ಮತ್ತು ಆತನ ತಂದೆ ಜ್ವಾಲಬೋರಯ್ಯರವರು ಶವ ತನಿಖಾ ಕಾಲದಲ್ಲಿ ಅವರ ಮಗಳ ಸಾವಿನ ಬಗ್ಗೆ ಅನುಮಾನ ವ್ಯಕ್ತಪಡಿಸಿ, ಶ್ವಾನದಳವನ್ನು ಕರೆಸುವಂತೆ ಕೇಳಿಕೊಂಡರೂ ಸಹ ಪೊಲೀಸ್ ನಾಯಿ ಬಂದು ಏನು ಮಾಡುತ್ತದೆ, ಎಂದು ಅವರನ್ನು ಹೆದರಿಸಿ, ಶ್ವಾನ ದಳವನ್ನು ಸ್ಥಳಕ್ಕೆ ಕರೆಸದೆ ಹಾಗೂ ಮೃತ ರಾಗಿಣಿಯ ಕಲರ್ ಭಾವಚಿತ್ರಗಳನ್ನು ತೆಗೆಸದೆ ಕಪ್ಪು ಬಿಳುಪು ಭಾವಚಿತ್ರಗಳನ್ನು ತೆಗೆಸಿ ಕರ್ತವ್ಯದಲ್ಲಿ ಅತೀವ ಲೋಪ ಹಾಗೂ ನಿರ್ಲಕ್ಷತೆಯನ್ನು ತೋರಿರುತ್ತೀರಿ.”

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪವು ಭಾಗಶಃ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮಸಂಖ್ಯೆ (1) ರಲ್ಲಿ ಓದಲಾದ ದಿನಾಂಕ 30–01–10ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು 6 ತಿಂಗಳ ಕಾಲ ಅವರ ಮುಂದಿನ ವೇತನ ಬಡ್ತಿಗೆ ದಕ್ಕೆಯಾಗದಂತೆ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಮೇಲ್ಮನವಿಯಲ್ಲಿ ಪರಿಗಣಿಸುವ ಸಮರ್ಥನೀಯ ಅಂಶಗಳು ಇರುವುದಿಲ್ಲ. ಮೇಲ್ಮನವಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 50 ಪೊಸಿಅ 2010, ಬೆಂಗಳೂರು, ದಿನಾಂಕ : 30–7–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ. ದೇವರಾಜ್, ಪಿ.ಎಸ್.ಐ., ಸಂಚಾರಿ ಪೊಲೀಸ್ ಠಾಣೆ, ಶಿವಮೊಗ್ಗ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಟಿ.ಎನ್. ರವಿಪ್ರಕಾಶ್),**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 2040

## ವಸತಿ ಸಚಿವಾಲಯ

**ವಿಷಯ** : ನೆರೆಹಾವಳಿ ಸಂತ್ರಸ್ತರಿಗೆ ಪುನರ್ವಸತಿ ಕಲ್ಪಿಸುವ ಬಗ್ಗೆ

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ : ವಇ 16 ಹೆಚ್ಎಹೆಚ್ 2010, ದಿನಾಂಕ : 12–03–2010 ಹಾಗೂ ತಿದ್ದುಪಡಿ ದಿನಾಂಕ : 23–03–2010

2) ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ : ಮುಮಕಾ/4482/2010, ದಿನಾಂಕ : 22–07–2010

* * *

**ಪ್ರಸ್ತಾವನೆ :**

ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿ ನೆರೆಹಾವಳಿ ಸಂತ್ರಸ್ಥರಿಗೆ ಪುನರ್ವಸತಿ ಕಲ್ಪಿಸುವುದಕ್ಕಾಗಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ಹಾಗೂ ಕರ್ನಾಟಕ ಗೃಹ ಮಂಡಳಿ ಮುಖಾಂತರ ಮನೆಗಳ ನಿರ್ಮಾಣವನ್ನು ಕೈಗೊಳ್ಳಲಾಗಿದ್ದು, ಇನ್ನೂ ಹೆಚ್ಚುವರಿ ಮನೆಗಳನ್ನು ನಿರ್ಮಿಸಲು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 16 ಹೆಚ್ಎಹೆಚ್ 2010, ಬೆಂಗಳೂರು, ದಿನಾಂಕ : 28ನೇ ಜುಲೈ, 2010**

ಬಾಗಲಕೋಟೆ ಜಿಲ್ಲೆಯಲ್ಲಿ ಮೆ. ಗೋವಿಂದ್ ಜಿ ಹ್ಯುಮ್ಯಾನಿಟೇರಿಯನ್ ಫೌಂಡೇಶನ್ನಿಗೆ ವಹಿಸಿಕೊಡಲಾದ ಒಟ್ಟು 700 ಮನೆಗಳ ನಿರ್ಮಾಣ ಕಾರ್ಯವನ್ನು ಆ ಸಂಸ್ಥೆಯು ಕೈಗೊಳ್ಳದಿರುವುದರಿಂದ, ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿ., ಹಾಗೂ ಕರ್ನಾಟಕ ಗೃಹ ಮಂಡಳಿಗೆ ಈ ಕೆಳಗಿನಂತೆ ಆಸರೆ ಮನೆಗಳ ನಿರ್ಮಾಣದ ಷರತ್ತು ಮತ್ತು ನಿಬಂಧನೆಗಳ ಮೇರೆಗೆ, ಆ ಮನೆಗಳ ನಿರ್ಮಾಣ ಕಾರ್ಯವನ್ನು ಕೂಡಲೇ ಪ್ರಾರಂಭಿಸಲು ಆದೇಶಿಸಲಾಗಿದೆ.

1) ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ವಹಿಸಿಕೊಡಲಾದ ಮನೆಗಳು

| ಜಿಲ್ಲೆ | ತಾಲ್ಲೂಕು | ಗ್ರಾಮಗಳು | ಮನೆಗಳ ಸಂಖ್ಯೆ |
|---|---|---|---|
| ಬಾಗಲಕೋಟೆ | ಮುಧೋಳ | ಮಲ್ಲಾಪುರ | 200 |

2) ಕರ್ನಾಟಕ ಗೃಹ ಮಂಡಳಿಗೆ ವಹಿಸಿಕೊಡಲಾದ ಮನೆಗಳು

| ಜಿಲ್ಲೆ | ತಾಲ್ಲೂಕು | ಗ್ರಾಮಗಳು | ಮನೆಗಳ ಸಂಖ್ಯೆ |
|---|---|---|---|
| ಬಾಗಲಕೋಟೆ | ಹುನಗುಂದ | ಗಂಜಿಹಾಳ | 500 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಆರ್. ವಲ್ಲೂರ**
ಪೀಠಾಧಿಕಾರಿ–2, ವಸತಿ ಇಲಾಖೆ

ಪಿ.ಆರ್. 2046

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣದ ವಿವರ ಕೆಳಕಂಡಂತಿದೆ.

| ಕ್ರ.ಸಂ. | ಎಲ್‌ಎಸಿ ಸಂಖ್ಯೆ | ಯಲ್ಲಾಪೂರ ತರ್ಪಿ ಮೇಡ್ಲೇರಿ ಗ್ರಾಮದ ಸ.ನಂ. | ವಿಸ್ತೀರ್ಣ ಎ.ಗುಂ. | ಪರಿಹಾರ ಮೊತ್ತ ಲಕ್ಷ ರೂ.ಗಳಲ್ಲಿ |
|---|---|---|---|---|
| 1 | 29/2003 | 42/1, 42/2 | 1–11 | 6,81,661–00 |

ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 86 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ 05ನೇ ಆಗಸ್ಟ್, 2010**

ಹಾವೇರಿ ಜಿಲ್ಲೆ, ರಾಣಿಬೆನ್ನೂರು ತಾಲ್ಲೂಕು ಯಕಲಾಸಪೂರ ಏತ ನೀರಾವರಿ ಯೋಜನೆಗಾಗಿ ಸ್ವಾಧೀನ ಪಡಿಸಿಕೊಂಡ ಯಲ್ಲಾಪೂರ ತರ್ಪಿ ಮೇಡ್ಲೇರಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಧನದ ಮೊತ್ತ ರೂ. 6,81,661–00 ಗಳನ್ನು (ಆರು ಲಕ್ಷ ಎಂಭತ್ತೊಂದು ಸಾವಿರದ ಆರುನೂರು ಅರವತ್ತೊಂದು ರೂಪಾಯಿಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ 16–05–2008 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಹೆಚ್. ಎಸ್. ಉದಯಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 2091

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಚಿತ್ರದುರ್ಗ ಜಿಲ್ಲೆ, ಮೊಳಕಾಲ್ಮೂರು ತಾಲ್ಲೂಕು ರಂಗಯ್ಯನದುರ್ಗ ಜಲಾಶಯದ ನಿರ್ಮಾಣ ಕಾಮಗಾರಿಗಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶಾನುಸಾರ ಹೆಚ್ಚುವರಿ ಪರಿಹಾರಧನ ಪಾವತಿಸುವ ಬಗ್ಗೆ.

**ಓದಲಾಗಿದೆ** : ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರುರವರ ದಿನಾಂಕ 21/06/2010ರ ಪತ್ರ ಸಂಖ್ಯೆ : ಮುಸದ:ಲೆಶಾಕೆ:ಲೆಸ–1:ಭೂಸ್ವಾಧೀನ 10–11/1424.

***

**ಪ್ರಸ್ತಾವನೆ :**

ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಚಿತ್ರದುರ್ಗ ಜಿಲ್ಲೆ, ಮೊಳಕಾಲ್ಮೂರು ತಾಲ್ಲೂಕು, ರಂಗಯ್ಯನದುರ್ಗ ಜಲಾಶಯದ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಮಠದ ಜೋಗಿಹಳ್ಳಿ ಗ್ರಾಮದ ಜಮೀನುಗಳಿಗೆ ನ್ಯಾಯಾಲಯವು ನೀಡಿರುವ ತೀರ್ಪಿನನುಸಾರ ಹೆಚ್ಚುವರಿ ಪರಿಹಾರ ಧನ ಪಾವತಿಸಲು ರೂ. 5,52,070–00 ಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಹೆಚ್ಚುವರಿ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿವೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 02–09–2004
- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ II(ಎ) ರಡಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ರಚಿಸಿದ ದಿನಾಂಕ 07–04–2006.

ಭೂಸ್ವಾಧೀನಕ್ಕೊಳಪಟ್ಟ ಮಠದ ಜೋಗಿಹಳ್ಳಿ ಗ್ರಾಮದ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳು ರಚಿಸಿದ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಇನ್ನೂ ಹೆಚ್ಚಿನ ಪರಿಹಾರ ನೀಡುವಂತೆ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಚಳ್ಳಕೆರೆ (ಹಿರಿಯ ಶ್ರೇಣಿ) ಸಿವಿಲ್ ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣವನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸುವ ಅಗತ್ಯ ಇಲ್ಲವೆಂದು ಕಂದಾಯ ಇಲಾಖೆಯು ಪತ್ರ ಸಂಖ್ಯೆ ಆರ್‌ಡಿ 18 ಎಲ್‌ಎಸಿ 2009 ದಿನಾಂಕ 05–01–2009ರಲ್ಲಿ ಅಭಿಪ್ರಾಯ ನೀಡಿರುತ್ತದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣದ ವಿವರ ಕೆಳಕಂಡಂತಿದೆ.

| ಕ್ರ.ಸಂ. | ಎಲ್‌ಎಸಿ ಸಂಖ್ಯೆ | ಮಠದ ಜೋಗಿಹಳ್ಳಿ ಗ್ರಾಮದ ಸ.ನಂ. | ವಿಸ್ತೀರ್ಣ ಎ.ಗುಂ. | ಪರಿಹಾರ ಮೊತ್ತ ಲಕ್ಷ ರೂ.ಗಳಲ್ಲಿ |
|---|---|---|---|---|
| 1 | 2/2008 | 8/2 (ಖುಷ್ಕಿ) | 1–10 | 1,68,147–00 |
| 2 | 3/2008 | 10/2(ನೀರಾವರಿ) | 1–39 | 3,83,923–00 |
| | | | ಒಟ್ಟು | 5,52,070–00 |

ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 89 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ 05ನೇ ಆಗಸ್ಟ್, 2010**

ಚಿತ್ರದುರ್ಗ ಜಿಲ್ಲೆ, ಮೊಳಕಾಲ್ಮೂರು ತಾಲ್ಲೂಕು, ರಂಗಯ್ಯನದುರ್ಗ ಜಲಾಶಯದ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಮತದ ಜೋಗಿಹಳ್ಳಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಧನದ ಮೊತ್ತ ರೂ. 5,52,070–00 ಗಳನ್ನು (ಐದು ಲಕ್ಷ ಐವತ್ತೆರಡು ಸಾವಿರದ ಎಪ್ಪತ್ತು ರೂಪಾಯಿಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು– ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ 16–05–2008 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಹೆಚ್. ಎಸ್. ಉದಯಕುಮಾರ್)**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)

ಪಿ.ಆರ್. 2092 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## REVENUE SECRETARIAT

**CIRCULAR**

RD 220 ASD 2010, Bengaluru, dated 31-07-2010

**Sub :-** Issuing of Bogus Certificates of Scheduled Castes and Scheduled Tribes to ineligible persons.

**Ref :-** NHRC's D.O. No. 10-01-2010-PRP & P, dated 19-01-2010

***

The Joint Secretary NHRC, New Delhi in the letter dt. 19-01-2010 has stated that, The National Human Rights Commission is deeply concerned about the protection of the rights of disadvantaged sections of the society like Scheduled Castes and Scheduled Tribes. In the meeting of the Statutory Full Commission held on 20-11-2009, the Commission noted that the issue of bogus caste certificate is becoming a serious issue and adequate remedial measures are not being taken in this regard by the concerned authorities. Use of bogus certificate by ineligible persons is depriving genuine candidates belonging to SCs and STs from the opportunities in Government jobs and educational institutions. It is a serious matter of concern that such incidents are on increase day by day.

The Commission desire that a fool-proof mechanism may be put in place by the concerned authorities to ensure that no bogus caste certificate is issued to non-eligible persons and the persons resorting to such practices and using such bogus certificate are brought to book in an efficient and effective manner and requested to take necessary action in this regard immediately.

The issue of bogus certificates to ineligible persons is a serious matter. The ineligible persons having obtained bogus certificates are depriving the eligible persons belonging to SCs and STs from opportunities in Government jobs and Educational Institutions.

Therefore, all Regional Commissioners, Deputy Commissioners, Assistant Commissioners and Tahsildars are hereby strictly instructed to take appropriate legal actions against those who secure and using such bogus certificates.

(**S. B. Sasalatti)**

Under Secretary to Governent

P.R. 2093 Revenue Department (Services-3)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ರಾಯಚೂರು ಜಿಲ್ಲೆ, ಲಿಂಗಸೂಗೂರು ತಾಲ್ಲೂಕು ಉಳಿಮೇಶ್ವರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಧನ ಪಾವತಿಸುವ ಬಗ್ಗೆ.

**ಓದಲಾಗಿದೆ** : ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 09/06/2010ರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾಭೂಸ್ವಾಪ್ರ/2009–10/3379.

***

**ಪ್ರಸ್ತಾವನೆ :**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ರಾಯಚೂರು ಜಿಲ್ಲೆ, ಲಿಂಗಸೂಗೂರು ತಾಲ್ಲೂಕು ಉಳಿಮೇಶ್ವರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ

ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿವೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 18-09-2003
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 07-02-2005.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಕುಷ್ಟಗಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಿಂದ ತೃಪ್ತರಾಗದ ಭೂಮಾಲೀಕರು ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಲಿಂಗಸೂಗೂರು ಸಿವಿಲ್ ನ್ಯಾಯಾಲಯದಲ್ಲಿ ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ಪಡೆದುಕೊಂಡಿದ್ದಾರೆ. ಈ ತೀರ್ಪಿನಲ್ಲಿ ಸಿವಿಲ್ ನ್ಯಾಯಾಲಯವು ಪ್ರತಿ ಎಕರೆಗೆ ರೂ. 70,000/-ಗಳನ್ನು ನಿಗದಿಪಡಿಸಿತ್ತು. ಈ ದರವನ್ನು ಸಹ ಒಪ್ಪದೇ ಕೆಲವು ಪ್ರಕರಣಗಳಲ್ಲಿ ಜಿಲ್ಲಾ ನ್ಯಾಯಾಲಯದಲ್ಲಿ ಎಂ.ಎ. ಹಾಗೂ ಕೆಲವು ಪ್ರಕರಣಗಳಲ್ಲಿ ಉಚ್ಚ ನ್ಯಾಯಾಲಯದಲ್ಲಿ ಎಂ.ಎಫ್.ಎ. ಪ್ರಕರಣಗಳನ್ನು ದಾಖಲಿಸಿದ್ದು ಈ ಪ್ರಕರಣಗಳಲ್ಲಿ ಮಾನ್ಯ ನ್ಯಾಯಾಲಯವು ಪ್ರತಿ ಎಕರೆಗೆ ರೂ. 81,600/-ಗಳನ್ನು ನಿಗದಿಪಡಿಸಿದೆ.

ಉಚ್ಚ ನ್ಯಾಯಾಲಯದ ಎಂಎಫ್ಎ ಪ್ರಕರಣಗಳ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ: ಲಾ 1192 ಎಲ್ಎಸ್‌ಪಿ 2008, ದಿನಾಂಕ 02-08-2008ರಂದು ಅಭಿಪ್ರಾಯ ನೀಡಿದೆ. ಜಿಲ್ಲಾ ನ್ಯಾಯಾಲಯದಲ್ಲಿ ಪ್ರಕರಣಗಳ ತೀರ್ಪಿನ ಮೇಲೆ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ : ಆರ್‌ಡಿ 696 ಎಲ್‌ಸಿಜಿ 2009, ದಿನಾಂಕ 15-05-09ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ.

| ಕ್ರ.ಸಂ. | ಎಲ್ಎಸಿ ಸಂಖ್ಯೆ | ಎಂಎಫ್ಎ | ಎಂಎ | ಸ.ನಂ. | ವಿಸ್ತೀರ್ಣ ಎ-ಗುಂ | ಗ್ರಾಮ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|---|---|---|
| 1 | 240/06 | – | 20/07 | 87/5 | 1-00 | ಬನ್ನಿಗೋಳ | 51407 |
| 2 | 241/06 | – | 26/07 | 89 | 0-32 | ಬನ್ನಿಗೋಳ | 40982 |
| 3 | 242/06 | – | 21/07 | 95/1 | 0-30 | ಬನ್ನಿಗೋಳ | 38376 |
| 4 | 243/06 | – | 25/07 | 96/1/1 | 0-22 | ಬನ್ನಿಗೋಳ | 28101 |
| 5 | 244/06 | – | 22/07 | 102/3 | 0-06 | ಬನ್ನಿಗೋಳ | 9900 |
| 6 | 245/06 | 7514/07 | – | 102/4 | 2-24 | ಬನ್ನಿಗೋಳ | 129594 |
| 7 | 246/06 | 7515/07 | – | 102/5 | 1-00 | ಉಳಿಮೇಶ್ವರ | 112054 |
| 8 | 247/06 | 7618/07 | – | 103/3 | 1-20 | ಬನ್ನಿಗೋಳ | 74471 |
| 9 | 248/06 | – | 27/07 | 104 | 0-20 | ಬನ್ನಿಗೋಳ | 25340 |
| 10 | 249/06 | 7617/07 | – | 141/2 | 2-00 | ಬನ್ನಿಗೋಳ | 133704 |
| 11 | 250/06 | – | 23/07 | 147/1 | 1-00 | ಬನ್ನಿಗೋಳ | 51408 |
| 12 | 251/06 | 7693/07 | – | 142/2 | 4-10 | ಬನ್ನಿಗೋಳ | 212279 |
| 13 | 252/06 | 7692/07 | – | 142/3 | 4-00 | ಬನ್ನಿಗೋಳ | 199749 |
| 14 | 253/06 | – | 24/07 | 60.1 | 1-00 | ಉಳಿಮೇಶ್ವರ | 51408 |
| | | | | | | ಒಟ್ಟು | **1158773** |

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 85 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ 04ನೇ ಆಗಸ್ಟ್, 2010**

ರಾಯಚೂರು ಜಿಲ್ಲೆ, ಲಿಂಗಸೂಗೂರು ತಾಲ್ಲೂಕು ಉಳಿಮೇಶ್ವರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬನ್ನಿಗೋಳ ಮತ್ತು ಉಳಿಮೇಶ್ವರ ಗ್ರಾಮಗಳ ಮೇಲ್ಕಂಡ ಸರ್ವೆ ನಂಬರ್‌ಗಳಿಗೆ ಸೇರಿದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ., ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕ ಹಾಕಿದ ಪರಿಹಾರ ಧನ ಮೊತ್ತ ರೂ. 11,58,773-00 ಗಳನ್ನು (ಹನ್ನೊಂದು ಲಕ್ಷದ ಐವತ್ತೆಂಟು ಸಾವಿರದ ಏಳುನೂರ ಎಪ್ಪತ್ಮೂರು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವಚ್ಚವನ್ನು 2010-11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702-00-800-1-00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು- ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16-05-2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಹೆಚ್. ಎಸ್. ಉದಯಕುಮಾರ್)**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 2094

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಹಾವೇರಿ ಜಿಲ್ಲೆ, ರಾಣೆಬೆನ್ನೂರು ತಾಲ್ಲೂಕು ಅಸುಂಡಿ ನಾಲಾ ಯೋಜನೆಗಾಗಿ ಸ್ವಾಧೀನಪಡಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಧನ ಪಾವತಿಸುವ ಕುರಿತು

**ಓದಲಾಗಿದೆ** : ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 26/05/2010ರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11/3168.

***

**ಪ್ರಸ್ತಾವನೆ :**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಹಾವೇರಿ ಜಿಲ್ಲೆ, ರಾಣೆಬೆನ್ನೂರು ತಾಲ್ಲೂಕು ಅಸುಂಡಿ ನಾಲಾ ಯೋಜನೆಯ ಕುದ್ರಿಹಾಳ ಕಾಲುವೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕುದ್ರಿಹಾಳ ಗ್ರಾಮದ ಜಮೀನುಗಳಿಗೆ ರಾಣೆಬೆನ್ನೂರು ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿವೆ.

– ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 29–12–1983
– ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 23–05–1990.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ರಾಣೆಬೆನ್ನೂರು ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ)ದಲ್ಲಿ ಭೂಸಾಧೀನ ಪ್ರಕರಣ ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ : ಆರ್‌ಡಿ 601 ಎಲ್‌ಎಸಿ(ಎಲ್‌ಸಿ) 2007, ದಿನಾಂಕ 31–01–2008ರಲ್ಲಿ ಅಭಿಪ್ರಾಯ ನೀಡಿದೆ. ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕಣಗಳ ವಿವರ ಕೆಳಕಂಡಂತಿದೆ :

| ಕ್ರ.ಸಂ. | ಎಲ್‌ಎಸಿ ಸಂಖ್ಯೆ | ಬೇವಿನಹಳ್ಳಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 2/95 | 132/1 | 0–09 | 73065 |
| 2 | 6/95 | 132/2 | 0–36 | 292080 |
| | | | ಒಟ್ಟು | **365145** |

*ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 76 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ 06ನೇ ಆಗಸ್ಟ್, 2010**

ಹಾವೇರಿ ಜಿಲ್ಲೆ, ರಾಣೆಬೆನ್ನೂರು ತಾಲ್ಲೂಕು ಅಸುಂಡಿ ನಾಲಾ ಯೋಜನೆಯ ಕುದ್ರಿಹಾಳ ಕಾಲುವೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕುದ್ರಿಹಾಳ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸ.ನಂ.ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಧನ ಮೊತ್ತ ರೂ. 3,65,145–00 ಗಳನ್ನು (ಮೂರು ಲಕ್ಷದ ಅರವತ್ತೈದು ಸಾವಿರದ ನೂರ ನಲವತ್ತೈದು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಹೆಚ್. ಎಸ್. ಉದಯಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 2095

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಧಾರವಾಡ ಜಿಲ್ಲೆ, ಕಲಘಟಗಿ ತಾಲ್ಲೂಕು ಸೋಮನಕೊಪ್ಪ ಸಣ್ಣ ನೀರಾವರಿ ಕೆರೆ ಕೋಡಿ ನಿರ್ಮಾಣ ಕಾಮಗಾರಿಗಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶಾನುಸಾರ ಹೆಚ್ಚುವರಿ ಪರಿಹಾರಧನ ಪಾವತಿಸುವ ಬಗ್ಗೆ.

**ಓದಲಾಗಿದೆ** : ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 03/06/2010ರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2009–10/3273.

***

**ಪ್ರಸ್ತಾವನೆ :**

ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಧಾರವಾಡ ಜಿಲ್ಲೆ, ಕಲಘಟಗಿ ತಾಲ್ಲೂಕು ಸೋಮನಕೊಪ್ಪ ಸಣ್ಣ ನೀರಾವರಿ ಕೆರೆ ಕೋಡಿ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಸೋಮನಕೊಪ್ಪ ಗ್ರಾಮದ ಜಮೀನುಗಳಿಗೆ ನ್ಯಾಯಾಲಯವು ನೀಡಿರುವ ತೀರ್ಪಿನನುಸಾರ ಹೆಚ್ಚುವರಿ ಪರಿಹಾರ ಧನ ಪಾವತಿಸಲು ರೂ. 2,34,833–00 ಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಹೆಚ್ಚುವರಿ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿವೆ.

– ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 12–05–2005
– ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ ೩೩(ಎ) ರಡಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ರಚಿಸಿದ ದಿನಾಂಕ 07–03–2006.

ಭೂಸ್ವಾಧೀನಕ್ಕೊಳಪಟ್ಟ ಸೋಮನಕೊಪ್ಪ ಗ್ರಾಮದ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳು ರಚಿಸಿದ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಇನ್ನೂ ಹೆಚ್ಚಿನ ಪರಿಹಾರ ನೀಡುವಂತೆ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಧಾರವಾಡ (ಹಿರಿಯ ಶ್ರೇಣಿ) ಸಿವಿಲ್ ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣವನ್ನು ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸುವ ಅಗತ್ಯ ಇಲ್ಲವೆಂದು ಕಂದಾಯ ಇಲಾಖೆಯು ಪತ್ರ ಸಂಖ್ಯೆ ಆರ್‌ಡಿ 743 ಎಲ್‌ಸಿಬಿ 2009 ದಿನಾಂಕ 17–03–2009ರಲ್ಲಿ ಅಭಿಪ್ರಾಯ ನೀಡಿರುತ್ತದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣದ ವಿವರ ಕೆಳಕಂಡಂತಿದೆ.

| ಕ್ರ.ಸಂ. | ಎಲ್‌ಎಸಿ ಸಂಖ್ಯೆ | ಸೋಮನಕೊಪ್ಪ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ ಲಕ್ಷ ರೂ.ಗಳಲ್ಲಿ |
|---|---|---|---|---|
| 1 | 118/2006 | 72/1 | 0–28 | 2,34,833–00 |

ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 78 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ 05ನೇ ಆಗಸ್ಟ್, 2010**

ಧಾರವಾಡ ಜಿಲ್ಲೆ, ಕಲಘಟಗಿ ತಾಲ್ಲೂಕು ಸೋಮನಕೊಪ್ಪ ಸಣ್ಣ ನೀರಾವರಿ ಕೆರೆ ಕೋಡಿ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಸೋಮನಕೊಪ್ಪ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಧನದ ಮೊತ್ತ ರೂ. 2,34,833–00 ಗಳನ್ನು (ಎರಡು ಲಕ್ಷದ ಮುವತ್ತಾನ್ಲುಕ್ಕು ಸಾವಿರದ ಎಂಟುನೂರ ಮೂವತ್ಮೂರು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅದೇಶ ಸಂಖ್ಯೆ ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಹೆಚ್. ಎಸ್. ಉದಯಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 2096

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ** : ಕರ್ನಾಟಕ ರಾಜ್ಯದ ವಿವಿಧ ಪ್ರಮುಖ ಪ್ರವಾಸಿ ಕೇಂದ್ರಗಳಲ್ಲಿ ಸಿಮೆಂಟ್ ಕಾಂಕ್ರೀಟ್ ಹೆಲಿಪ್ಯಾಡ್‌ಗಳನ್ನು ನಿರ್ಮಿಸುವ ಬಗ್ಗೆ.

**ಓದಲಾಗಿದೆ** : 1) ಆದೇಶ ಸಂಖ್ಯೆ. ಮೂಅಇ 110 ರಾಅವಿ 2006 ದಿನಾಂಕ : 22-02-2007

2) ಅಪರ ಜಿಲ್ಲಾಧಿಕಾರಿಗಳು, ರಾಯಚೂರು ಜಿಲ್ಲೆ, ಇವರ ಪತ್ರ ಸಂಖ್ಯೆ : ಕಂದಾಯ/ಎಂಎಸ್‌ಸಿ/124/2006-07/823. ದಿನಾಂಕ : 13-05-2010

* * *

**ಪ್ರಸ್ತಾವನೆ :**

ಮೇಲೆ ಕ್ರ.ಸಂ. 1 ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ : 22-02-2007ರಲ್ಲಿ ರಾಜ್ಯದ ಪ್ರಮುಖ 20 ಸ್ಥಳಗಳಲ್ಲಿ ಶಾಶ್ವತ (ಸಿಮೆಂಟ್ ಕಾಂಕ್ರೀಟ್) ಹೆಲಿಪ್ಯಾಡ್‌ಗಳನ್ನು ನಿರ್ಮಿಸಲು ಅನುಮೋದನೆ ನೀಡಿ ಪ್ರತಿ ಹೆಲಿಪ್ಯಾಡ್‌ಗೆ ಗರಿಷ್ಠ ರೂ. 10.00 ಲಕ್ಷಗಳ ಬಿಡುಗಡೆಗೆ ಮಂಜೂರಾತಿ ನೀಡಿರುತ್ತದೆ. ಈ ಆದೇಶದಂತೆ ಸಂಬಂಧಿಸಿದ ಜಿಲ್ಲಾಧಿಕಾರಿಗಳು ತಮ್ಮ ವ್ಯಾಪ್ತಿಗೆ ಬರುವ ಸ್ಥಳಗಳಲ್ಲಿ ಹೆಲಿಪ್ಯಾಡ್ ನಿರ್ಮಿಸಲು ಪ್ರತಿ ಹೆಲಿಪ್ಯಾಡ್‌ಗೆ ರೂ. 10.00 ಲಕ್ಷದಂತೆ ಹಣವನ್ನು ಪೇಯಿಸ್ ರಸೀತಿಯ ಮೂಲಕ ಪಡೆದುಕೊಂಡಿರುತ್ತಾರೆ. ಆದರೆ ಜಿಲ್ಲಾಧಿಕಾರಿಗಳು, ರಾಯಚೂರು ಇವರು ಹೆಲಿಪ್ಯಾಡ್ ನಿರ್ಮಾಣಕ್ಕೆ ಮಂಜೂರಾಗಿರುವ ರೂ. 10.00 ಲಕ್ಷಗಳನ್ನು ಇದುವರೆಗೂ ಪಡೆಯದೆ ಇರುವುದರಿಂದ ಈ ವಿಷಯವನ್ನು ಪುನರ್ ಪರಿಶೀಲಿಸಿದೆ. ವಿಮಾನ ಇಳಿದಾಣ ನಿರ್ಮಿಸಲು ಕ್ರಮ ಕೈಗೊಳ್ಳುತ್ತಿರುವುದರಿಂದ ಇಲ್ಲಿ ಹೆಲಿಪ್ಯಾಡ್ ನಿರ್ಮಿಸುವ ಪ್ರಸ್ತಾವನೆಯನ್ನು ಕೈಬಿಡಲು ಸರ್ಕಾರ ನಿರ್ಧರಿಸಿರುವುದರಿಂದ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಮೂಅಇ 110 ರಾಅವಿ 2006, ಬೆಂಗಳೂರು, ದಿನಾಂಕ : 6ನೇ ಜುಲೈ, 2010**

ರಾಯಚೂರು ಜಿಲ್ಲೆಯಲ್ಲಿ ವಿಮಾನ ಇಳಿದಾಣ ನಿರ್ಮಿಸಲು ಸರ್ಕಾರ ನಿರ್ಧರಿಸಿರುವುದರಿಂದ ರಾಯಚೂರಿನಲ್ಲಿ ಹೆಲಿಪ್ಯಾಡ್ ನಿರ್ಮಿಸಲು ಈ ಹಿಂದೆ ನೀಡಿದ್ದ ಮಂಜೂರಾತಿಯನ್ನು ಹಿಂಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಎಸ್. ವೇಣುಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಪಿ.ಆರ್. 2106 ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ** : ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆಯ ಅಧೀನದಲ್ಲಿ ಬರುವ ಕ್ಷೇತ್ರ ಇಲಾಖೆಗಳಿಗೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವಾ (ಕಾರ್ಯ ನಿರ್ವಹಣಾ ವರದಿಗಳು) ನಿಯಮಗಳು 2000 ರನ್ವಯ ಗ್ರೂಪ್ ಎ ಮತ್ತು ಬಿ ಅಧಿಕಾರಿಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳನ್ನು ಪರಿಶೀಲನೆ ಮಾಡಲು ವರದಿ ಪ್ರಾಧಿಕಾರ/ಪರಿಶೀಲನಾ ಪ್ರಾ./ಅಂಗೀಕಾರ ಪ್ರಾ.ಗಳನ್ನು ಗುರುತಿಸುವ ಬಗ್ಗೆ.

**ಪ್ರಸ್ತಾವನೆ :**

ಕರ್ನಾಟಕ ನಾಗರೀಕ ಸೇವಾ (ಕಾರ್ಯನಿರ್ವಹಣಾ ವರದಿಗಳು) ನಿಯಮಗಳು 2000ರಲ್ಲಿನ ನಿಯಮಗಳು ದಿ : 1-4-2000ದಿಂದ ಜಾರಿಗೆ ಬಂದಿದ್ದು, ಅದರನ್ವಯ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಕ್ಷೇತ್ರೀಯ ಇಲಾಖೆಗಳಲ್ಲಿ ಗ್ರೂಪ್-ಎ ಮತ್ತು ಗ್ರೂಪ್-ಬಿ ವೃಂದದ ಅಧಿಕಾರಿಗಳ ವರ್ಷದ ಏಪ್ರಿಲ್ 1ನೇ ದಿನಾಂಕದಿಂದ ಮುಂದಿನ ವರ್ಷದ ಮಾರ್ಚ್ 31ನೇ ದಿನಾಂಕದವರೆಗೆ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳನ್ನು ಯಾರು ನಮೂದಿಸಬೇಕೆಂಬ ಬಗ್ಗೆ ನಿರ್ಧಿಷ್ಟವಾಗಿ ತೀರ್ಮಾನ ತೆಗದುಕೊಳ್ಳುವುದಕ್ಕೆ ಸಂಬಂಧಿಸಿದಂತೆ ನಿಯಮ 11ರನ್ವಯ ಕಾರ್ಯನಿರ್ವಹಣಾ ವರದಿಯ ಬಗ್ಗೆ ವರದಿ ಮಾಡುವ ಪ್ರಾಧಿಕಾರ/ಪರಿಶೀಲನಾ ಪ್ರಾಧಿಕಾರ ಮತ್ತು ಅಂಗೀಕಾರ ಪ್ರಾಧಿಕಾರಗಳನ್ನು ನಿಗದಿಪಡಿಸುವುದು ಸದರಿ ನಿಯಮಗಳ ನಿಯಮ 3(3)ರ ಪ್ರಕಾರ ಕಾರ್ಯನಿರ್ವಹಣಾ ವರದಿಗಳ ಸಂರಕ್ಷಣಾ ಪ್ರಾಧಿಕಾರ ಮತ್ತು ನಿಯಮ 9ರನ್ವಯ ಸೂಕ್ತ ಪ್ರಾಧಿಕಾರ ನಿಗದಿಪಡಿಸುವುದು ಅವಶ್ಯಕವಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 150 ಸ್ವೀಮರ 2010, ಬೆಂಗಳೂರು, ದಿನಾಂಕ : 3ನೇ ಆಗಸ್ಟ್ 2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಕಾರ್ಯನಿರ್ವಹಣಾ ವರದಿಗಳು) ನಿಯಮಗಳು 2000ದ ನಿಯಮ 11ರನ್ವಯ ಕನ್ನಡ ಮತ್ತು ಸಂಸ್ಕೃತಿ ಮತ್ತು ವಾರ್ತಾ ಇಲಾಖೆಯ ಕ್ಷೇತ್ರೀಯ ಇಲಾಖೆಗಳ ಗ್ರೂಪ್-ಎ ಮತ್ತು ಗ್ರೂಪ್-ಬಿ ಅಧಿಕಾರಿಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿ ಬಗ್ಗೆ ವರದಿ ಮಾಡುವ ಪ್ರಾಧಿಕಾರ/ಪರಿಶೀಲನಾ ಪ್ರಾಧಿಕಾರ ಮತ್ತು ಅಂಗೀಕಾರ ಪ್ರಾಧಿಕಾರಗಳನ್ನು ಅನುಬಂಧದಲ್ಲಿ ಸೂಚಿಸಿರುವಂತೆ ನಿಗದಿಪಡಿಸಿದೆ.

ಕರ್ನಾಟಕ ನಾಗರೀಕ ಸೇವಾ (ಕಾರ್ಯನಿರ್ವಹಣಾ ವರದಿಗಳು) 2000ದ ನಿಯಮ 9ರನ್ವಯ ಗ್ರೂಪ್-ಎ ವೃಂದ ಅಧಿಕಾರಿಗಳ ಕಾರ್ಯನಿರ್ವಹಣಾ ವರದಿಯಲ್ಲಿ ಪ್ರತಿಕೂಲ ಷರಾವಿದ್ದಲ್ಲಿ, ಸರ್ಕಾರದ ಉಪ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ, ಇವರು ಸಂಬಂಧಿಸಿದ ಅಧಿಕಾರಿಗಳಿಗೆ ತಿಳಿಸುವ ಅಧಿಕಾರ ಹೊಂದಿರುತ್ತಾರೆ. ಗ್ರೂಪ್ ಬಿ ಅಧಿಕಾರಿಗಳಿಗೆ ಸಂಬಂಧಿಸಿದಂತೆ ಇಲಾಖಾ ಮುಖ್ಯಸ್ಥರು ಅಧಿಕಾರ ಹೊಂದಿರುತ್ತಾರೆ. ಸದರಿ ನಿಯಮಗಳ ನಿಯಮ 3(3) ರನ್ವಯ ಇಲಾಖಾ ಮುಖ್ಯಸ್ಥರು ಹಾಗೂ ಕೆ.ಎ.ಎಸ್. ಗ್ರೂಪ್-ಎ ಹಿರಿಯ ಶ್ರೇಣಿ ಅಧಿಕಾರಿಗಳು ಕಾರ್ಯನಿರ್ವಹಣಾ ವರದಿಗಳನ್ನು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಆಪ್ತ ಶಾಖೆಯಲ್ಲಿ ಸಂರಕ್ಷಿಸಲು ಹಾಗೂ ಇನ್ನಿತರ ಗ್ರೂಪ್-ಎ ವೃಂದದ ಅಧಿಕಾರಿಗಳ ಕಾರ್ಯನಿರ್ವಹಣಾ ವರದಿಗಳನ್ನು ಇಲಾಖೆಯ ಕಾರ್ಯದರ್ಶಿಯವರ ಆಪ್ತ ಶಾಖೆಯಲ್ಲಿ ಸಂರಕ್ಷಿಸಿಡತಕ್ಕದ್ದು. ಗ್ರೂಪ್-ಬಿ ವೃಂದದ ಅಧಿಕಾರಿಗಳ ಕಾರ್ಯನಿರ್ವಹಣಾ ವರದಿಯನ್ನು ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರು ಸಂರಕ್ಷಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ,

**ಅನುಬಂಧ**

**ದಿನಾಂಕ : 3–8–2010ರ ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 150 ಸ್ವೀಮರ 2010ಕ್ಕೆ**

**ಗ್ರೂಪ್ – ಎ**

| ಇಲಾಖೆ | ಪದನಾಮ | ವರದಿ ಪ್ರಾಧಿಕಾರ | ಪರಿಶೀಲನಾ ಪ್ರಾಧಿಕಾರ | ಅಂಗೀಕರಿಸುವ ಪ್ರಾಧಿಕಾರ |
|---|---|---|---|---|
| ಕನ್ನಡ ಮತ್ತು ಸಂಸ್ಕೃತಿ ಇಲಾಖೆ | ನಿರ್ದೇಶಕರು | ಕಾರ್ಯದರ್ಶಿ | ಮುಖ್ಯ ಕಾರ್ಯದರ್ಶಿ | ಮುಖ್ಯ ಕಾರ್ಯದರ್ಶಿ/ಸಂಬಂಧಿಸಿದ ಇಲಾಖಾ ಮಂತ್ರಿಗಳು |
| | ಜಂಟಿ ನಿರ್ದೇಶಕರು | ನಿರ್ದೇಶಕರು | ಕಾರ್ಯದರ್ಶಿಗಳು | ಕಾರ್ಯದರ್ಶಿ/ಸಂಬಂಧಿಸಿದ ಇಲಾಖಾ ಮಂತ್ರಿಗಳು |
| | ಉಪ ನಿರ್ದೇಶಕರು | ಜಂಟಿ ನಿರ್ದೇಶಕರು | ನಿರ್ದೇಶಕರು | ಕಾರ್ಯದರ್ಶಿಗಳು |
| ವಾರ್ತಾ ಇಲಾಖೆ | ನಿರ್ದೇಶಕರು | ಕಾರ್ಯದರ್ಶಿ | ಮುಖ್ಯ ಕಾರ್ಯದರ್ಶಿ | ಮುಖ್ಯ ಕಾರ್ಯದರ್ಶಿ/ಸಂಬಂಧಿಸಿದ ಇಲಾಖಾ ಮಂತ್ರಿಗಳು |
| | ಜಂಟಿ ನಿರ್ದೇಶಕರು | ನಿರ್ದೇಶಕರು | ಕಾರ್ಯದರ್ಶಿ | ಕಾರ್ಯದರ್ಶಿ/ಸಂಬಂಧಿಸಿದ ಇಲಾಖಾ ಮಂತ್ರಿಗಳು |
| | ಉಪ ನಿರ್ದೇಶಕರು ಅಥವಾ ತತ್ಸಮಾನ ಹುದ್ದೆ | ಜಂಟಿ ನಿರ್ದೇಶಕರು | ನಿರ್ದೇಶಕರು | ಕಾರ್ಯದರ್ಶಿ |
| ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯ ಇಲಾಖೆ | ನಿರ್ದೇಶಕರು | ಕಾರ್ಯದರ್ಶಿ | ಮುಖ್ಯ ಕಾರ್ಯದರ್ಶಿ | ಮುಖ್ಯ ಕಾರ್ಯದರ್ಶಿ/ಸಂಬಂಧಿಸಿದ ಇಲಾಖಾ ಮಂತ್ರಿಗಳು |
| | ಉಪ ನಿರ್ದೇಶಕರು ಅಥವಾ ತತ್ಸಮಾನ ಯಾವುದೇ ಗ್ರೂಪ್–ಎ ಅಧಿಕಾರಿ | ಜಂಟಿ ನಿರ್ದೇಶಕರು ಇಲ್ಲದಿದ್ದ ಪಕ್ಷದಲ್ಲಿ ನಿರ್ದೇಶಕರು | ಕಾರ್ಯದರ್ಶಿ | ಕಾರ್ಯದರ್ಶಿ |
| ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ | ಆಯುಕ್ತರು | ಕಾರ್ಯದರ್ಶಿ | ಮುಖ್ಯ ಕಾರ್ಯದರ್ಶಿ | ಮುಖ್ಯ ಕಾರ್ಯದರ್ಶಿ/ಸಂಬಂಧಿಸಿದ ಇಲಾಖಾ ಮಂತ್ರಿಗಳು |
| | ಉಪ ನಿರ್ದೇಶಕರು | ಆಯುಕ್ತರು | ಕಾರ್ಯದರ್ಶಿಗಳು | ಕಾರ್ಯದರ್ಶಿಗಳು |
| ಪತ್ರಾಗಾರ ಇಲಾಖೆ | ನಿರ್ದೇಶಕರು | ಕಾರ್ಯದರ್ಶಿ | ಮುಖ್ಯ ಕಾರ್ಯದರ್ಶಿ | ಮುಖ್ಯ ಕಾರ್ಯದರ್ಶಿ/ಸಂಬಂಧಿಸಿದ ಇಲಾಖಾ ಮಂತ್ರಿಗಳು |
| | ಉಪ ನಿರ್ದೇಶಕರು ಅಥವಾ ತತ್ಸಮಾನ ಹುದ್ದೆ ಪತ್ರಪಾಲಕರು | ಉಪ ನಿರ್ದೇಶಕರು | ನಿರ್ದೇಶಕರು | ಕಾರ್ಯದರ್ಶಿ |
| ಗೆಜೆಟಿಯರ್ ಇಲಾಖೆ | ಮುಖ್ಯ ಸಂಪಾದಕರು | ಕಾರ್ಯದರ್ಶಿ | ಮುಖ್ಯ ಕಾರ್ಯದರ್ಶಿ | ಮುಖ್ಯ ಕಾರ್ಯದರ್ಶಿ/ಸಂಬಂಧಿಸಿದ ಇಲಾಖಾ ಮಂತ್ರಿಗಳು |
| ಕನ್ನಡ ಅಭಿವೃದ್ಧಿ ಪ್ರಾಧಿಕಾರ | ಕಾರ್ಯದರ್ಶಿ | ಅಧ್ಯಕ್ಷರು | ಅಧ್ಯಕ್ಷರು | ಅಧ್ಯಕ್ಷರು |
| ಕಾವಾ | ಡೀನ್ | ಕಾರ್ಯದರ್ಶಿ | ಕಾರ್ಯದರ್ಶಿ | ಕಾರ್ಯದರ್ಶಿ |
| ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ | ಆಯುಕ್ತರು | ಜಿಲ್ಲಾಧಿಕಾರಿಗಳು | ಕಾರ್ಯದರ್ಶಿ | ಕಾರ್ಯದರ್ಶಿ |

**ಗ್ರೂಪ್ – ಬಿ**

| ಇಲಾಖೆ | ಪದನಾಮ | ವರದಿ ಪ್ರಾಧಿಕಾರ | ಪರಿಶೀಲನಾ ಪ್ರಾಧಿಕಾರ | ಅಂಗೀಕರಿಸುವ ಪ್ರಾಧಿಕಾರ |
|---|---|---|---|---|
| ಕನ್ನಡ ಮತ್ತು ಸಂಸ್ಕೃತಿ ಇಲಾಖೆ | ಸಹಾಯಕ ನಿರ್ದೇಶಕರು | ಉಪ ನಿರ್ದೇಶಕರು ಇಲ್ಲದಿದ್ದಲ್ಲಿ ಜಂಟಿ ನಿರ್ದೇಶಕರು | ನಿರ್ದೇಶಕರು | ನಿರ್ದೇಶಕರು |
| ವಾರ್ತಾ ಇಲಾಖೆ | ಸಹಾಯಕ ನಿರ್ದೇಶಕರು ಅಥವಾ ತತ್ಸಮಾನ ಹುದ್ದೆ | ಉಪ ನಿರ್ದೇಶಕರು | ಜಂಟಿ ನಿರ್ದೇಶಕರು | ನಿರ್ದೇಶಕರು |

| | | | | |
|---|---|---|---|---|
| ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯ ಇಲಾಖೆ | ಸಹಾಯಕ ನಿರ್ದೇಶಕರು | ಉಪ ನಿರ್ದೇಶಕರು | ಜಂಟಿ ನಿರ್ದೇಶಕರಿಲ್ಲದಿದ್ದಲ್ಲಿ ನಿರ್ದೇಶಕರು | ನಿರ್ದೇಶಕರು |
| ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ | ಸಹಾಯಕ ನಿರ್ದೇಶಕರು | ಉಪ ನಿರ್ದೇಶಕರು | ಜಂಟಿ ನಿರ್ದೇಶಕರಿಲ್ಲದಿದ್ದಲ್ಲಿ ನಿರ್ದೇಶಕರು | ನಿರ್ದೇಶಕರು |
| | ತಾಂತ್ರಿಕ ಸಹಾಯಕರು | ಉಪ ನಿರ್ದೇಶಕರಿಲ್ಲದಿದ್ದಲ್ಲಿ ಜಂಟಿ ನಿರ್ದೇಶಕರು | ಆಯುಕ್ತರು | ಆಯುಕ್ತರು |
| ಪತ್ರಾಗಾರ ಇಲಾಖೆ | ಸಹ ಪತ್ರಪಾಲಕರು ಅಥವಾ ತತ್ಸಮಾನ ಹುದ್ದೆ | ಪತ್ರಪಾಲಕರು | ಉಪ ನಿರ್ದೇಶಕರು | ನಿರ್ದೇಶಕರು |
| ಗೆಜೆಟಿಯರ್ ಇಲಾಖೆ | ಹಿರಿಯ ಸಂಪಾದಕರು / ಸಂಪಾದಕರು | ಮುಖ್ಯ ಸಂಪಾದಕರು | ಕಾರ್ಯದರ್ಶಿ | ಕಾರ್ಯದರ್ಶಿ |

**ಎಂ. ಕೆ. ಧರ್ಮರಾಜಪ್ಪ**

ಪಿ.ಆರ್. 2107

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ,

## ಸಹಕಾರ ಸಚಿವಾಲಯ

**ವಿಷಯ** : ಕರ್ನಾಟಕ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ಬೆಂಗಳೂರು ಇದರ ಆಡಳಿತಗಾರರ ಅವಧಿ ವಿಸ್ತರಿಸುವ ಕುರಿತು.

**ಓದಲಾಗಿದೆ** : 1. ಸಹಕಾರ ಸಂಘಗಳ ನಿಬಂಧಕರ ಆದೇಶ ಸಂಖ್ಯೆ : ಎಲ್‌ಡಿಬಿ 2/84/ ಚುನಾವಣೆ/2009-10 ದಿನಾಂಕ : 28-04-2010

2. ಸಹಕಾರ ಸಂಘಗಳ ನಿಬಂಧಕರ ಪತ್ರಸಂಖ್ಯೆ : ಎಲ್‌ಡಿಬಿ. 2/84/ಚುನಾವಣೆ/2009-10 ದಿನಾಂಕ : 14-07-2010

* * *

**ಪ್ರಸ್ತಾವನೆ :**

ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ಆಡಳಿತ ಮಂಡಳಿ ಸದಸ್ಯರ 2010-11 ರಿಂದ 2014-15 ರ ಅವಧಿಗೆ ಬ್ಯಾಂಕಿನ ಆಡಳಿತ ಮಂಡಳಿಯನ್ನು ರಚಿಸಲು ಅಗತ್ಯವಾದ ಕೋರಂ ಆಗಲು ಸಾಧ್ಯವಿಲ್ಲವೆಂದು ಪರಿಗಣಿಸಿ ಬ್ಯಾಂಕಿಗೆ ಮೇಲೆ ಓದಲಾದ (1)ರ ಸಹಕಾರ ಸಂಘಗಳ ನಿಬಂಧಕರ ಆದೇಶದಲ್ಲಿ ಆಡಳಿತಗಾರರನ್ನು 3 ತಿಂಗಳ ಅವಧಿಗೆ ನೇಮಿಸಲಾಗಿದೆ. ಈ ಆದೇಶದಂತೆ ಸದರಿ ಬ್ಯಾಂಕಿನ ಆಡಳಿತ ಮಂಡಳಿ ಸದಸ್ಯರ ಚುನಾವಣೆಯನ್ನು ದಿನಾಂಕ : 28-07-2010ರೊಳಗೆ ನಡೆಸಬೇಕಾಗಿತ್ತು.

ಆದರೆ ಬ್ಯಾಂಕಿನ ಉಪ ನಿಯಮ ಸಂಖ್ಯೆ : 24(1) ರಂತೆ 27 ಜನ ಚುನಾಯಿತ ಪ್ರತಿನಿಧಿಗಳು ಇರಲು ಅವಕಾಶ ಇದ್ದು, ಕರ್ನಾಟಕ ಸಹಕಾರ ಸಂಘಗಳ ನಿಯಮ 14 (ಇ) ರನ್ವಯ ಬ್ಯಾಂಕಿನ ಆಡಳಿತ ಮಂಡಳಿಯನ್ನು ರಚಿಸಲು ಅಗತ್ಯವಾದ ಕೋರಂ ಆಗಲು ಈಗ ಸಹಿತ ಸಾಧ್ಯವಿಲ್ಲವೆಂದು ತೀರ್ಮಾನಿಸಿ ಈ ಕುರಿತು ಸಹಕಾರ ಸಂಘಗಳ ನಿಬಂಧಕರಿಗೆ ಕಸ್ಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಈ ಕುರಿತು ವರದಿ ನೀಡಿರುತ್ತಾರೆ. ಬ್ಯಾಂಕಿನ ಉಪನಿಯಮ ಸಂಖ್ಯೆ : 24(1) ರನ್ವಯ ಆಡಳಿತ ಮಂಡಳಿ ರಚಿಸಲು ಸಾಕಷ್ಟು ಕೋರಂ ಇಲ್ಲದಿರುವುದರಿಂದ ಕಸ್ಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಸಲ್ಲಿಸಿರುವ ಪ್ರಸ್ತಾವನೆಯನ್ನು ಬ್ಯಾಂಕಿನ ಆಡಳಿತಾವಧಿಯನ್ನು ವಿಸ್ತರಿಸಲು ಬ್ಯಾಂಕಿನಿಂದ ಬಂದ ಪ್ರಸ್ತಾವನೆಯನ್ನು ಪರಿಗಣಿಸಬಹುದಾಗಿದೆ. ಈಗಿನ ಆಡಳಿತಗಾರರಾದ ಶ್ರೀ ಸುಭಾಷ್ ಚಂದ್ರ, ಸಹಕಾರ ಸಂಘಗಳ ಅಪರ ನಿಬಂಧಕರು ಇವರು ದಿನಾಂಕ : 31-07-2010ಕ್ಕೆ ನಿವೃತ್ತರಾಗುವುದರಿಂದ ಅವರ ನಂತರ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರನ್ನು ಆಡಳಿತಗಾರರಾಗಿ ನೇಮಕಾತಿ ಮಾಡಬೇಕೆಂದು ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಸರ್ಕಾರವನ್ನು ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈಗ ಅಡಳಿತಗಾರರ ಅವಧಿಯನ್ನು 3 ತಿಂಗಳಿಗಿಂತ ಹೆಚ್ಚಿನ ಅವಧಿಗೆ ವಿಸ್ತರಿಸುವುದು ಅನಿವಾರ್ಯವಾಗಿರುತ್ತದೆ. ಏಕೆಂದರೆ ಕನಿಷ್ಠ ಕೋರಂಗೆ ಬೇಕಾದಷ್ಟು ಸದಸ್ಯರು ಚುನಾಯಿತರಾಗಬೇಕಾದಷ್ಟು ಪಿಕಾರ್ಡ್ ಬ್ಯಾಂಕುಗಳು ಅರ್ಹತೆ ಹೊಂದಿರುವುದಿಲ್ಲ. ಆದ್ದರಿಂದ ಈ ಪರಿಸ್ಥಿತಿಯಲ್ಲಿ ರಾಜ್ಯ ಸರ್ಕಾರವು 6 ತಿಂಗಳಿಗೆ ಚುನಾವಣೆ ಜರುಗಿಸಲು ಅನುಮತಿಸಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 98ಕ್ಕೂನಲ್ಲಿ ಅಧಿಕಾರ ಹೊಂದಿರುತ್ತದೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 144 ಸಿಎಲ್‌ಎಂ 2010, ಬೆಂಗಳೂರು, ದಿನಾಂಕ : 30ನೇ ಜುಲೈ, 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಸಂಗತಿಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 98ಕ್ಯೂ (1) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ, ಬೆಂಗಳೂರು ಇದರ ಅಡಳಿತಗಾರರ ಅವಧಿಯನ್ನು ದಿನಾಂಕ : 28–07–2010 ರಿಂದ 28–01–2011 ರವರೆಗೆ ವಿಸ್ತರಿಸಿ ಆದೇಶಿಸಿದೆ.

ಸಹಕಾರ ಸಂಘಗಳ ನಿಬಂಧಕರು, ಇವರನ್ನು ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ, ಬೆಂಗಳೂರು ಇದರ ಆಡಳಿತಗಾರರನ್ನಾಗಿ ದಿನಾಂಕ : 31–07–2010ರಿಂದ ನೇಮಿಸಲಾಗಿದೆ. ಆಡಳಿತಗಾರರು ದಿನಾಂಕ : 28–01–2011 ರೊಳಗೆ ಮೇಲ್ಕಂಡ ಸಂಘಕ್ಕೆ ಚುನಾವಣೆ ನಡೆಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ.

ಪಿ.ಆರ್. 2108

## ಸಹಕಾರ ಸಚಿವಾಲಯ

**ವಿಷಯ** : ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಕಕಮರಿ ತಾ : ಅಥಣಿ, ಬೆಳಗಾವಿ ಜಿಲ್ಲೆ ಇದರ ಆಡಳಿತಗಾರರ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ** : 1. ಸಹಕಾರ ಸಂಘಗಳ ಸಹಾಯಕ ನಿಬಂಧಕರು ಚಿಕ್ಕೋಡಿ ಇವರ ಆದೇಶ ಸಂಖ್ಯೆ : ಎಆರ್–1/ಆರ್‌ಎಸ್‌ಆರ್/416/2010–11 ದಿನಾಂಕ : 23–03–2010 ಹಾಗೂ 25–05–2010

**2.** ಆಡಳಿತಗಾರರು, ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಕಕಮರಿ ತಾ: ಅಥಣಿ ಬೆಳಗಾವಿ ಜಿಲ್ಲೆ ಇವರ ಪತ್ರ ದಿನಾಂಕ : 10–06–2010.

* * *

**ಪ್ರಸ್ತಾವನೆ :**

ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮೇಲೆ ಓದಲಾದ 1ರ ಆದೇಶದಲ್ಲಿ ಮೇಲ್ಕಂಡ ಸಂಘಕ್ಕೆ ಆಡಳಿತಗಾರರನ್ನು ನೇಮಿಸಿ ತದನಂತರ ಆಡಳಿತಗಾರರ ಅವಧಿಯನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 28ಎ(5)ರಡಿಯಲ್ಲಿ ದಿನಾಂಕ : 23–07–2010ರವರೆಗೆ ವಿಸ್ತರಿಸಿ ಆದೇಶ ಮಾಡಿರುತ್ತಾರೆ. ತದನಂತರ ದಿನಾಂಕ : 15–07–2010ರಂದು ಚುನಾವಣೆ ದಿನಾಂಕವನ್ನು ನಿಗದಿಪಡಿಸಲಾಗಿದ್ದರೂ ಸಹ ಆಡಳಿತ ಮಂಡಳಿಯ ಸ್ಥಾನಕ್ಕೆ ಯಾವುದೇ ನೋಟೀಸ್ ಅಥವಾ ಪ್ರಮಾಣಪತ್ರ ಸ್ವೀಕೃತವಾಗಿಲ್ಲವೆಂದು ವರದಿ ಸಲ್ಲಿಸಿ ಈ ಕಾರಣದಿಂದಾಗಿ ಆಡಳಿತಗಾರರ ಅವಧಿಯನ್ನು ಮೂರು ತಿಂಗಳು ಅವಧಿಗೆ ವಿಸ್ತರಿಸಲು ವಿನಂತಿಸಿರುತ್ತಾರೆ. ಮೇಲೆ ಓದಲಾದ 2ರ ಪತ್ರದಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಕಕಮರಿ ತಾ; ಅಥಣಿ ಬೆಳಗಾವಿ ಜಿಲ್ಲೆ ಇದರ ಆಡಳಿತಗಾರರು ಜೂನ್ ತಿಂಗಳವರೆಗೆ ಸಾಲ ವಸೂಲಿ ಹಾಗೂ ಮುಂಗಾರು ಹಂಗಾಮಿನ ಮಳೆ ಪ್ರಾರಂಭವಾಗಿರುವುದರಿಂದ ಬ್ಯಾಂಕಿನ ಆಡಳಿತ ಮಂಡಳಿ ಸದಸ್ಯರ ಚುನಾವಣೆ ಜರುಗಿಸಲು ಆಡಳಿತಾತ್ಮಕವಾಗಿ ಅಡಚಣೆ ಉಂಟಾಗುತ್ತಿದೆ. ಬಹಳಷ್ಟು ರೈತ ಸದಸ್ಯರು ಮುಂಗಾರು ಬಿತ್ತನೆ ಕಾರ್ಯದಲ್ಲಿ ನಿರತರಾಗಿದ್ದು ಚುನಾವಣೆಯಲ್ಲಿ ಸಕ್ರಿಯವಾಗಿ ಭಾಗವಹಿಸುವ ಸಂಭವ ಕಡಿಮೆ ಇರುವುದರಿಂದ ಬ್ಯಾಂಕಿನ ಹಾಗೂ ಸದಸ್ಯರ ಹಿತದೃಷ್ಟಿಯಿಂದ ಆಡಳಿತಗಾರರ ಅವಧಿಯನ್ನು ವಿಸ್ತರಿಸಬೇಕೆಂದು ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 98ಕ್ಯೂ ಪ್ರಕಾರ ಅನಿವಾರ್ಯ ಪ್ರಸಂಗಗಳಲ್ಲಿ ಚುನಾವಣೆಗಳನ್ನು ಮುಂದೂಡಲು/ ಅನುಮತಿ ನೀಡಲು ಸರ್ಕಾರಕ್ಕೆ ಅಧಿಕಾರವಿರುತ್ತದೆ. ಆದುದರಿಂದ ಸದರಿ ಸಂಘದ ಚುನಾವಣೆಯನ್ನು ಆರು ತಿಂಗಳ ಅವಧಿಗೆ ಮಂದೂಡಲು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 121 ಸಿಎಲ್‌ಎಂ 2010, ಬೆಂಗಳೂರು, ದಿನಾಂಕ : 30ನೇ ಜುಲೈ, 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಸಂಗತಿಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 98ಕ್ಯೂ (1) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಕಕಮರಿ ತಾ : ಅಥಣಿ ಬೆಳಗಾವಿ ಜಿಲ್ಲೆ ಇದರ ಆಡಳಿತಗಾರರ ಅವಧಿಯನ್ನು ದಿನಾಂಕ : 24–07–2010 ರಿಂದ 23–01–2011ರವರೆಗೆ ವಿಸ್ತರಿಸಿ ಆದೇಶಿಸಿದೆ ಹಾಗೂ ಬ್ಯಾಂಕ್ ನಿರೀಕ್ಷಕರು, ಬೆಳಗಾವಿ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ನಿ., ಅಥಣಿ ಶಾಖೆ ಇವರನ್ನು ಆಡಳಿತಗಾರರನ್ನಾಗಿ ಮುಂದುವರಿಸಲಾಗಿದೆ. ಆಡಳಿತಗಾರರು ದಿನಾಂಕ : 23–01–2011ರೊಳಗೆ ಮೇಲ್ಕಂಡ ಸಂಘಕ್ಕೆ ಚುನಾವಣೆ ನಡೆಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ.

ಪಿ.ಆರ್. 2109

## ಸಹಕಾರ ಸಚಿವಾಲಯ

**ವಿಷಯ :** ಸಮಗ್ರ ಗ್ರಾಮ ಸೇವಾ ಸಮಿತಿ, ಚಿಂಚಖಂಡಿ, ಮುಧೋಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಈ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :**
1. ಸಹಕಾರ ಸಂಘಗಳ ನಿಬಂಧಕರವರ ಪತ್ರ ಸಂಖ್ಯೆ : ಆರ್‌ಸಿಎಸ್/ಎಡಿಎಂ/63/ಎಸ್‌ಓಆರ್/ 2008-09, ದಿನಾಂಕ : 30-12-2009
2. ಸರ್ಕಾರದ ಸಮ ಸಂಖ್ಯೆಯ ಕಾರಣ ಕೇಳುವ ಸೂಚನಾ ಪತ್ರ ದಿನಾಂಕ : 28-01-2010.
3. ಅಧ್ಯಕ್ಷರು ಮತ್ತು ಕಾರ್ಯದರ್ಶಿ, ಸಮಗ್ರ ಗ್ರಾಮ ಸೇವಾ ಸಮಿತಿ, ಚಿಂಚಖಂಡಿ, ಮೂಧೋಳ ಇವರು ಕಾರಣ ಕೇಳುವ ಸೂಚನಾ ಪತ್ರಕ್ಕೆ ನೀಡಿರುವ ಉತ್ತರ ದಿನಾಂಕ : 13-02-2010.
4. ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರ ಪತ್ರ ಸಂಖ್ಯೆ : ಆರ್‌ಸಿಎಸ್/ಎಡಿಎಂ/63/ಎಸ್‌ಓಆರ್/2008-09 ದಿನಾಂಕ : 19-06-2010.

* * *

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ : 30-12-2009ರ ಪತ್ರದಲ್ಲಿ ಸಮಗ್ರ ಗ್ರಾಮ ಸೇವಾ ಸಮಿತಿ, ಚಿಂಚಖಂಡಿ, ಮುಧೋಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆ, ಈ ಸಂಘದಲ್ಲಿ ಪೋಟಿ ನಿಯಮದ ವಿರುದ್ಧವಾದ ಕಾರ್ಯಚಟುವಟಿಕೆಗಳು ಜರುಗುತ್ತಿವೆ ಎಂಬ ಬಗ್ಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 25ರ ರೀತ್ಯಾ ವಿಚಾರಣೆ ನಡೆಸಿ ಸಹಕಾರ ಸಂಘಗಳ ಉಪನಿಬಂಧಕರು, ಬಾಗಲಕೋಟೆರವರು ಸಂಘದ ವ್ಯವಹಾರದ ಬಗ್ಗೆ ನಡೆಸಲಾದ ವಿಚಾರಣಾ ವರದಿಯಲ್ಲಿ ಕರ್ನಾಟಕ ಸಂಘಗಳ ನೊಂದಣಿ ಕಾಯ್ದೆ 1960ರ ನಿಯಮಗಳನ್ನು ಉಲ್ಲಂಘಿಸಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಸದರಿ ಕಾಯ್ದೆಯ ಕಲಂ 27-ಎ ರನ್ವಯ ಆಡಳಿತಾಧಿಕಾರಿಯನ್ನು ನೇಮಕಾತಿ ಮಾಡುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಅಧ್ಯಕ್ಷರು/ಕಾರ್ಯದರ್ಶಿಗಳು, ಸಮಗ್ರ ಗ್ರಾಮ ಸೇವಾ ಸಮಿತಿ, ಚಿಂಚಖಂಡಿ, ಮುಧೋಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ರವರಿಗೆ ಕಾರಣ ಕೇಳುವ ಸೂಚನಾ ಪತ್ರವನ್ನು ಕಳುಹಿಸಿ ಸಂಸ್ಥೆಯ ಸರ್ವ ಸದಸ್ಯರ ವಾರ್ಷಿಕ ಮಹಾ ಸಭೆಯನ್ನು ನಿಯಮಾನುಸಾರ ಪ್ರತಿ ವರ್ಷ ನಡೆಸದೆಯಿರುವುದು, 2004-05 ರಿಂದ 2006-07 ರವರೆಗೆ ಸಭೆ ಜರುಗಿಸದೆ ಇರುವುದು, ಸಭೆ ಜರುಗಿಸಿದ ಅವಧಿಯಲ್ಲಿ ಲೆಕ್ಕಪರಿಶೋಧನೆಯಾದ ಹಣಕಾಸು ತಃಖ್ತೆಗಳನ್ನು ನೋಂದಣಾಧಿಕಾರಿಗಳ ಕಛೇರಿಗೆ ಸಲ್ಲಿಸದೇ ಇರುವುದು, ಸಂಘದ 2002-03 ರಿಂದ 2007-08 ನೇ ಸಾಲಿನ ಸರ್ವ ಸದಸ್ಯರ ದಾಖಲೆಗಳನ್ನು ಪರಿಶೀಲಿಸಲಾಗಿ ಕಲಂ 11ನ್ನು ಸ್ಪಷ್ಟವಾಗಿ ಉಲ್ಲಂಘಿಸಿರುವುದು ಹಾಗೂ ಕಲಂ 11 (1) ರ ಸ್ಪಷ್ಟ ಉಲ್ಲಂಘನೆಯಾಗಿರುವುದು, ಸಂಘದ ಬೈಲಾ ನಿಯಮ 4 ರಂತೆ ಆಡಳಿತ ಮಂಡಳಿಯನ್ನು ಸರಿಯಾದ ಸಮಯಕ್ಕೆ ನಡೆಸದೆ ಕರ್ನಾಟಕ ಸಂಘಗಳ ನೋಂದಣಿ ನಿಯಮ 7ರ ಉಲ್ಲಂಘನೆ, ಸಂಘದ ಹಣಕಾಸಿನ ಅವ್ಯವಹಾರ ಜರುಗಿರುವುದು, ಲೆಕ್ಕಪತ್ರ ಹಾಗೂ ಇತರೆ ದಾಖಲಾತಿ ನಿರ್ವಹಣೆಯಲ್ಲಿ ಲೋಪದೋಷಗಳು ಕಂಡು ಬಂದಿದ್ದು, ಹಿಂದಿನ ಆಡಳಿತ ಮಂಡಳಿಯ ಅವ್ಯವಹಾರಗಳನ್ನು ಸರಿಪಡಿಸಲು ಈಗಿನ ಆಡಳಿತ ಮಂಡಳಿಯು ಸೂಕ್ತ ಕ್ರಮ ಕೈಕೊಳ್ಳುವಲ್ಲಿ ವಿಫಲತೆ ಈ ಎಲ್ಲಾ ಲೋಪದೋಷಗಳನ್ನು ಸರಿಪಡಿಸಲು ಸದರಿ ಸಂಸ್ಥೆಯ ಹಿತದೃಷ್ಟಿಯಿಂದ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 25(1) ರನ್ವಯ ವಿಚಾರಣೆ ನಡೆಸಿ ಸಂಘದಲ್ಲಿ ಇರುವ ಲೋಪಗಳು ಆಗಿರುವುದರಿಂದ ಹಾಲಿ ಆಡಳಿತ ಮಂಡಳಿಯನ್ನು ರದ್ದುಗೊಳಿಸಿ ಸಂಘವನ್ನು ಸುವ್ಯವಸ್ಥಿತವಾಗಿ ನಡೆಸಿಕೊಂಡು ಹೋಗಲು ಅನುವಾಗುವಂತೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ)ರ ಪ್ರಕಾರ ಸಂಘಕ್ಕೆ ಆಡಳಿತಾಧಿಕಾರಿಯನ್ನು ಏಕೆ ನೇಮಕ ಮಾಡಬಾರದು ಎಂಬ ಬಗ್ಗೆ ಲಿಖಿತ ಹೇಳಿಕೆಯನ್ನು ಸೂಚನಾ ಪತ್ರ ತಲುಪಿದ 15 ದಿವಸಗಳೊಳಗಾಗಿ ಸರ್ಕಾರಕ್ಕೆ ತಿಳಿಸಿ ಸೂಚನಾ ಪತ್ರವನ್ನು ಹೊರಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ : (3) ರಲ್ಲಿ ಅಧ್ಯಕ್ಷರು/ ಕಾರ್ಯದರ್ಶಿಗಳು, ಸಮಗ್ರ ಗ್ರಾಮ ಸೇವಾ ಸಮಿತಿ, ಚಿಂಚಖಂಡಿ, ಮುಧೋಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ರವರು ಸರ್ಕಾರದ ಕಾರಣ ಕೇಳುವ ಸೂಚನಾ ಪತ್ರಕ್ಕೆ ಉತ್ತರ ನೀಡುತ್ತಾ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸಬಾರದೆಂದು ಕೇಳಿಕೊಂಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (4) ರಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ಬಾಗಲಕೋಟೆ ರವರು ಸದರಿ ಸಂಘದವರು ಸಲ್ಲಿಸಿದ ಉತ್ತರಗಳನ್ನು ಗಮನಿಸಲಾಗಿ ವಿಚಾರಣಾ ಅವಧಿಯಲ್ಲಿ ಕಂಡು ಬಂದ ಲೋಪದೋಷಗಳಿಗೆ ಸಮಾಧಾನಕರ ಉತ್ತರಗಳನ್ನು ಸಲ್ಲಿಸಿರುವುದಿಲ್ಲ. ವಿಚಾರಣಾಧಿಕಾರಿಗಳು ಆಡಳಿತಾಧಿಕಾರಿಯನ್ನು ನೇಮಿಸಲು ವಿಚಾರಣಾ ವರದಿಯಲ್ಲಿ ನೀಡಿದ ಅಭಿಪ್ರಾಯವು ಸರಿ ಇರುತ್ತದೆ. ಆದುದರಿಂದ ಸಮಗ್ರ ಗ್ರಾಮ ಸೇವಾ ಸಮಿತಿ ಚಿಂಚಖಂಡಿ, ಮುಧೋಳ ತಾಲ್ಲೂಕು ಇದಕ್ಕೆ ಆಡಳಿತಾಧಿಕಾರಿಯನ್ನು ನೇಮಿಸುವುದು ಸೂಕ್ತವೆಂದು ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಸರ್ಕಾರವು ಸಂಬಂಧಿಸಿದ ದಾಖಲೆ ಹಾಗೂ ಸಹಕಾರ ಸಂಘಗಳ ನಿಬಂಧಕರು ಸಲ್ಲಿಸಿರುವ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಸಂಸ್ಥೆಗೆ ಸಂಘಗಳ ನೋಂದಣಿ ಕಾಯ್ದೆಯ 1960 ರ ಕಲಂ 27-ಎ ರನ್ವಯ ಆಡಳಿತಾಧಿಕಾರಿಯನ್ನು ನೇಮಿಸುವುದು ಸೂಕ್ತವೆಂದು ಪರಿಗಣಿಸಿ ಆಡಳಿತಾಧಿಕಾರಿಯನ್ನು ನೇಮಿಸಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 05 ಸಸಂನೋ 2010, ಬೆಂಗಳೂರು, ದಿನಾಂಕ : 28ನೇ ಜುಲೈ, 2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸಮಗ್ರ ಗ್ರಾಮ ಸೇವಾ ಸಮಿತಿ, ಚಿಂಚಖಂಡಿ, ಮುಧೋಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಈ ಸಂಸ್ಥೆಯ ಆಡಳಿತ ಮಂಡಳಿಯಲ್ಲಿ ಈ ಕೆಳಕಂಡ ಲೋಪದೋಷಗಳು ಮೇಲ್ನೋಟಕ್ಕೆ ಕಂಡು ಬಂದಿವೆ.

(1) ವಾರ್ಷಿಕ ಮಹಾಸಭೆ 2004-05 ರಿಂದ 2006-07ರವರೆಗೆ ಜರುಗಿಸದೇ ಇರುವುದು.

(2) ಲೆಕ್ಕ ಪರಿಶೋಧನೆಯಾದ ಹಣಕಾಸು ತಃಖ್ತೆಗಳನ್ನು ನೋಂದಣಾಧಿಕಾರಿಗೆ ಸಲ್ಲಿಸದೇ ಇರುವುದು.

(3) ಹಣಕಾಸಿನ ಅವ್ಯವಹಾರ, ದಾಖಲೆಗಳ ನಿರ್ವಹಣೆಯಲ್ಲಿ ಲೋಪದೋಷ.

(4) ನೋಂದಣಿ ಕಾಯ್ದೆ ಕಲಂ 7, 11 ಸಂಘದ ಬೈಲಾ ಉಲ್ಲಂಘನೆ.

ಸದರಿ ಸಂಸ್ಥೆಯ ಹಿತದೃಷ್ಟಿಯಿಂದ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ಕಲಂ 27(ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬಾಗಲಕೋಟೆ ಇವರನ್ನು ಆಡಳಿತಾಧಿಕಾರಿಯನ್ನಾಗಿ ಆರು (6) ತಿಂಗಳ ಅವಧಿಗೆ ಅಥವಾ ಸದರಿ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಸಂಘದಲ್ಲಿ ಹಾಲಿ ನೋಂದಾಯಿತವಾಗಿರುವ ಸದಸ್ಯರುಗಳಿಂದ ಚುನಾವಣೆ ನಡೆಸಿ ಹೊಸ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ನಂಜುಂಡಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ.

ಪಿ.ಆರ್. 2110

## ಶಿಕ್ಷಣ ಸಚಿವಾಲಯ

## ಸುತ್ತೋಲೆ

**ಸಂಖ್ಯೆ ಇಡಿ 153 ಯೋಸಕ 2010 ಬೆಂಗಳೂರು, ದಿನಾಂಕ : 06–08–2010**

**ವಿಷಯ** : ಪ್ರಾಥಮಿಕ ಮತ್ತು ಪ್ರೌಢಶಾಲೆಗಳಿಗೆ ಕಾಂಪೌಂಡ್ ಹಾಗೂ ದುರಸ್ತಿ ಮಾಡುವ ಬಗ್ಗೆ.

ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಿಗೆ ಕಾಂಪೌಂಡ್ ನಿರ್ಮಾಣ ಹಾಗೂ ದುರಸ್ತಿಗೊಳಿಸಲು ಅನೇಕ ಪ್ರಸ್ತಾವನೆಗಳು ಬರುತ್ತಿದ್ದು, ರಾಜ್ಯ ವಲಯದಡಿ ಒದಗಿಸಿರುವ ಅನುದಾನದಿಂದ ಅವುಗಳಿಗೆ ಅನುದಾನ ನೀಡಲು ಅಸಾಧ್ಯವಾಗಿರುತ್ತದೆ. ಆದರೆ, ಶಾಲೆಗಳಿಗೆ ಕಾಂಪೌಂಡ್ ನಿರ್ಮಾಣ ಮತ್ತು ದುರಸ್ತಿ ಮಾಡಿಸುವುದು ಅತ್ಯಾವಶ್ಯಕವಾಗಿರುತ್ತದೆ.

ಮೇಲ್ಕಂಡ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಸಾರ್ವಜನಿಕ ಶಿಕ್ಷಣ ಇಲಾಖೆಯ ಎಲ್ಲಾ ತಾಲ್ಲೂಕುಗಳ ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಎಲ್ಲಾ ಜಿಲ್ಲೆಗಳ ಉಪ ನಿರ್ದೇಶಕರುಗಳು ಸರ್ಕಾರಿ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳಿಗೆ ಕಾಂಪೌಂಡ್ ಹಾಗೂ ದುರಸಿÛUÁV “National Rural Employment Guarantee Scheme”(ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ) ಅಡಿ ಸಂಬಂಧಪಟ್ಟ ಅಧಿಕಾರಿಗಳನ್ನು ಸಂಪರ್ಕಿಸಿ ಕಾರ್ಯ ಪ್ರವೃತ್ತರಾಗುವಂತೆ ಕೋರಲಾಗಿದೆ.

**ಐ.ಎಫ್. ಮಾಗಿ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ. (ಯೋಜನೆ)

ಪಿ.ಆರ್. ನಂ. 2124

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ** : ದಿ. ಮಹಾತ್ಮಗಾಂಧಿ ಸಹಕಾರಿ ಸಕ್ಕರೆ ಕಾರ್ಖಾನೆಯು ಎನ್.ಸಿ.ಡಿ.ಸಿ. ಯಿಂದ ಪಡೆದಿರುವ ಸಾಲವನ್ನು ಮೃದು ಸಾಲವನ್ನಾಗಿ ಪರಿವರ್ತಿಸುವ ಬಗ್ಗೆ.

**ಓದಲಾಗಿದೆ** :
1. ದಿನಾಂಕ 22–07–2002ರ ಸಿಎಂಡಬ್ಲ್ಯೂ 111 ಸಸಕಾ 2000ನೇ ಸಂಖ್ಯೆಯ ಸರ್ಕಾರದ ಆದೇಶ.
2. ದಿನಾಂಕ 26–10–2002ರ ಸಿಎಂಡಬ್ಲ್ಯೂ 111 ಸಸಕಾ 2000ನೇ ಸಂಖ್ಯೆಯ ಸರ್ಕಾರದ ಆದೇಶ.
3. ದಿನಾಂಕ 18–11–2003ರ ಸಿಎಂಡಬ್ಲ್ಯೂ 34 ಸಸಕಾ 2003ನೇ ಸಂಖ್ಯೆಯ ಸರ್ಕಾರದ ಆದೇಶ.
4. ದಿನಾಂಕ 04–10–2005ರ ಸಿಎಂಡಬ್ಲ್ಯೂ 111 ಸಸಕಾ 2000ನೇ ಸಂಖ್ಯೆಯ ಸರ್ಕಾರದ ಆದೇಶ.
5. ದಿನಾಂಕ 22–02–2007ರ ಸಇ 233 ಸಸಕಾ 2006ನೇ ಸಂಖ್ಯೆಯ ಸರ್ಕಾರದ ಆದೇಶ.
6. ದಿ. ಮಹಾತ್ಮಗಾಂಧಿ ಸಹಕಾರಿ ಸಕ್ಕರೆ ಕಾರ್ಖಾನೆಯ ಅಧ್ಯಕ್ಷರು ದಿನಾಂಕ 08–07–2008ರಂದು ಸಲ್ಲಿಸಿರುವ ಮನವಿ.
7. ದಿನಾಂಕ 04–09–2008 ಮತ್ತು 20–12–2008ರ ಡಿಎಸ್‌ಕೆ/ಎಫ್‌ಐಎನ್/65/2005–06ನೇ ಸಂಖ್ಯೆಯ ಕಬ್ಬು ಅಭಿವೃದ್ಧಿ ಆಯುಕ್ತರು ಮತ್ತು ಸಕ್ಕರೆ ನಿರ್ದೇಶಕರ ಪತ್ರಗಳು.

**ಪ್ರಸ್ತಾವನೆ:**

ಬೀದರ್ ಜಿಲ್ಲೆ ಭಾಲ್ಕಿಯ ದಿ. ಮಹಾತ್ಮಗಾಂಧಿ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತದ ಸ್ಥಾಪನೆಗಾಗಿ ಎನ್.ಸಿ.ಡಿ.ಸಿ.ಯು. ರಾಜ್ಯ ಸರ್ಕಾರದ ಮೂಲಕ ಅವಧಿ ಸಾಲವನ್ನು ಮಂಜೂರು ಮಾಡಿದ್ದು, ಈ ಮೊತ್ತವನ್ನು ಕಾರ್ಖಾನೆಗೆ ಕೆಳಕಂಡಂತೆ ಬಿಡುಗಡೆ ಮಾಡಲಾಗಿರುತ್ತದೆ.

(ರೂ. ಲಕ್ಷಗಳಲ್ಲಿ)

| ಕ್ರ.ಸಂ. | ಸರ್ಕಾರದ ಆದೇಶ ಮತ್ತು ದಿನಾಂಕ | ಮೊತ್ತ |
|---|---|---|
| 1. | ಸಿಎಂಡಬ್ಲ್ಯೂ 111 ಸಸಕಾ 2000 ದಿನಾಂಕ 22–07–2002 | 1610.00 |
| 2. | ಸಿಎಂಡಬ್ಲ್ಯೂ 111 ಸಸಕಾ 2000 ದಿನಾಂಕ 26–10–2002 | 920.73 |
| 3. | ಸಿಎಂಡಬ್ಲ್ಯೂ 34 ಸಸಕಾ 2003 ದಿನಾಂಕ 18–11–2003 | 125.47 |

| | | |
|---|---|---|
| 4. | ಸಿಎಂಡಬ್ಲ್ಯೂ 111 ಸಸಕಾ 2000 ದಿನಾಂಕ 04-10-2005 | 27.80 |
| 5. | ಸಇ 233 ಸಸಕಾ 2006 ದಿನಾಂಕ 22-02-2007 | 240.00 |
| | ಒಟ್ಟು | 2924.00 |

ದಿ. ಮಹಾತ್ಮಗಾಂಧಿ ಸಹಕಾರಿ ಸಕ್ಕರೆ ಕಾರ್ಖಾನೆಯ ಅಧ್ಯಕ್ಷರು ದಿನಾಂಕ 08-07-2008ರಂದು ಮನವಿ ಸಲ್ಲಿಸಿ, ಕಾರ್ಖಾನೆಯು ಮರುಪಾವತಿಸಲು ಬಾಕಿಯಿರುವ ಮೇಲ್ಕಂಡ ಎನ್.ಸಿ.ಡಿ.ಸಿ. ಸಾಲ ಮತ್ತು ಅದರ ಮೇಲಿನ ಬಡ್ಡಿ ಸೇರಿ ಒಟ್ಟು ರೂ. 4822.47 ಲಕ್ಷಗಳನ್ನು ಷೇರು ಬಂಡವಾಳವನ್ನಾಗಿ ಅಥವಾ ಬಡ್ಡಿ ರಹಿತ ಸಾಲವನ್ನಾಗಿ ಪರಿವರ್ತಿಸಲು ಕೋರಿರುತ್ತಾರೆ.

ಕಾರ್ಖಾನೆಯ ಕೋರಿಕೆ ಬಗ್ಗೆ ಕಬ್ಬು ಅಭಿವೃದ್ಧಿ ಆಯುಕ್ತರು ಮತ್ತು ಸಕ್ಕರೆ ನಿರ್ದೇಶಕರು ದಿನಾಂಕ 04-09-2008ರ ಪತ್ರದ ಮೂಲಕ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಕಾರ್ಖಾನೆಯು ತನ್ನ ಸಾಮರ್ಥ್ಯಕ್ಕನುಗುಣವಾಗಿ ಕಬ್ಬು ನುರಿಸದ ಕಾರಣ ಇದು ಪ್ರಾರಂಭವಾದಾಗಿನಿಂದ ಈವರೆವಿಗೂ ನಷ್ಟವನ್ನು ಅನುಭವಿಸುತ್ತಿದೆಯೆಂದೂ, ಕಾರ್ಖಾನೆ ಪಡೆದಿರುವ ಸಾಲವನ್ನು ಸರ್ಕಾರವು ಎನ್.ಸಿ.ಡಿ.ಸಿ.ಗೆ ಕಾಲಕಾಲಕ್ಕೆ ಮರುಪಾವತಿಸುತ್ತಿದೆಯೆಂದೂ, ಕಾರ್ಖಾನೆ ಅನುಭವಿಸುತ್ತಿರುವ ನಷ್ಟವನ್ನು ಕಡಿಮೆ ಮಾಡುವ ಸಲುವಾಗಿ ಕಾರ್ಖಾನೆಯಲ್ಲಿ ಸಹ ವಿದ್ಯುತ್ ಘಟಕ ಸ್ಥಾಪಿಸುವುದರಿಂದ ಕಾರ್ಖಾನೆಯ ಆದಾಯ ಹೆಚ್ಚಾಗಿ ಕಾರ್ಮಿಕರಿಗೆ ಮತ್ತು ರೈತಾಪಿ ವರ್ಗಕ್ಕೆ ಅನುಕೂಲವಾಗುತ್ತದೆಂದು ಮತ್ತು ಕಾರ್ಖಾನೆಯ ಕ್ರೋಢೀಕೃತ ನಷ್ಟದ ನಿಮಿತ್ತ ಹಣಕಾಸು ಸಂಸ್ಥೆಗಳು ಕಾರ್ಖಾನೆಗೆ ಉಪ ಘಟಕಗಳನ್ನು ಸ್ಥಾಪಿಸಲು ಆರ್ಥಿಕ ನೆರವು ನೀಡಲು ಮುಂದೆ ಬರುತ್ತಿಲ್ಲವಾದ್ದರಿಂದ ಕಾರ್ಖಾನೆಯ ನೆಟ್‌ವರ್ತನ್ನು ಸುಧಾರಿಸುವುದು ಅವಶ್ಯಕವಾಗಿದೆಯೆಂದೂ ತಿಳಿಸುತ್ತಾ, ಈ ಕಾರಣಗಳಿಂದಾಗಿ ಕಾರ್ಖಾನೆಯು ಎನ್.ಸಿ.ಡಿ.ಸಿ. ಯಿಂದ ಪಡೆದಿರುವ ಅವಧಿ ಸಾಲ ರೂ. 2924.00 ಲಕ್ಷ ಮತ್ತು ದಿನಾಂಕ 31-03-2008 ರವರೆಗೆ ಕ್ರೋಢಿಕೃತವಾಗಿರುವ ಬಡ್ಡಿ ರೂ. 1898.47 ಲಕ್ಷಗಳು ಸೇರಿ ಒಟ್ಟು ರೂ. 4822.47 ಲಕ್ಷಗಳನ್ನು ಸರ್ಕಾರದ ಷೇರು ಬಂಡವಾಳವನ್ನಾಗಿ ಪರಿವರ್ತಿಸಲು ಅಥವಾ ಬಡ್ಡಿ ರಹಿತ ಸಾಲವನ್ನಾಗಿ ಪರಿವರ್ತಿಸಲು ಶಿಫಾರಸ್ಸು ಮಾಡಿರುತ್ತಾರೆ.

ಈ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ ನಂತರ ಮೇಲ್ಕಂಡ ಅವಧಿ ಸಾಲ ರೂ. 2924.00 ಲಕ್ಷ ಮತ್ತು ದಿನಾಂಕ 31-03-2009 ರವರೆಗೆ ಕ್ರೋಢಿಕೃತವಾಗಿರುವ ಬಡ್ಡಿ ರೂ. 2201.00 ಲಕ್ಷಗಳನ್ನು ಸಹ ಪರಿಗಣಿಸಿ ಒಟ್ಟು ರೂ. 5125.00 ಲಕ್ಷಗಳನ್ನು ಮೃದು ಸಾಲವನ್ನಾಗಿ ಪರಿವರ್ತಿಸಲು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ವಾಕೈ 11 ಸಸಕಾ 2008, ಬೆಂಗಳೂರು, ದಿನಾಂಕ: 06.08.2010**

ಬೀದರ್ ಜಿಲ್ಲೆ ಭಾಲ್ಕಿಯ ದಿ. ಮಹಾತ್ಮಗಾಂಧಿ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತವು ಸರ್ಕಾರಕ್ಕೆ ಮರುಪಾವತಿಸಲು ಬಾಕಿ ಇರುವ ಎನ್.ಸಿ.ಡಿ.ಸಿ. ಸಾಲ ರೂ. 2924.00 ಲಕ್ಷಗಳು (ರೂ. 29.24 ಕೋಟಿ) ಮತ್ತು ದಿನಾಂಕ 31-03-2009 ರವರೆಗೆ ಕ್ರೋಢೀಕೃತವಾಗಿರುವ ಬಡ್ಡಿ ರೂ. 2201.00 ಲಕ್ಷಗಳು (ರೂ. 22.01 ಕೋಟಿ) ಸೇರಿ **ಒಟ್ಟು ರೂ. 5125.00 ಲಕ್ಷಗಳನ್ನು (ರೂ. 51.25 ಕೋಟಿಗಳನ್ನು) ಈ ಕೆಳಕಂಡ ಷರತ್ತುಗಳಿಗೊಳಪಟ್ಟು, ಮೃದು ಸಾಲವಾಗಿ (Soft Loan) ಪರಿವರ್ತಿಸಲು** ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ :-

(1) KERC ಅನುಮೋದಿಸಿರುವ ಸಾಮಾನ್ಯ ಲಾಭಾಂಶವನ್ನು ಒಳಗೊಂಡಂತೆ ವಿದ್ಯುತ್ತನ್ನು ಮೂಲ ಬೆಲೆಯಲ್ಲಿ ಮಾರಾಟ ಮಾಡುವ ಬಗ್ಗೆ ಕಾರ್ಖಾನೆಯು ರಾಜ್ಯದಲ್ಲಿ ತೀವ್ರ ವಿದ್ಯುತ್ ಕೊರತೆಯಿಂದಾಗಿ KERC costing ಸೂತ್ರಗಳಂತೆ GESCOM ಗೆ ವಿದ್ಯುತ್ ಸರಬರಾಜು ಮಾಡಲು ದೀರ್ಘಾವಧಿಯ ವಿದ್ಯುತ್ ಖರೀದಿ ಒಪ್ಪಂದ ಮಾಡಿಕೊಳ್ಳತಕ್ಕದ್ದು. ಕಾರ್ಖಾನೆಗೆ ಸುಮಾರು ಶೇ. 80 ರಷ್ಟು ದೀರ್ಘಾವಧಿ ಆರ್ಥಿಕ ನೆರವನ್ನು ಸರ್ಕಾರವು ಈಗಾಗಲೇ ಒದಗಿಸಿದೆ ;

(2) ಸರ್ಕಾರದ ಸಾಲ ಮತ್ತು ಕ್ರೋಢೀಕೃತ ಬಡ್ಡಿಯನ್ನು ಸೇರಿ ಒಟ್ಟು ರೂ. 51.25 ಕೋಟಿಗಳು (ರೂ. 5125.00 ಲಕ್ಷಗಳು) **ಪ್ರತಿ ಅರ್ಧ ವಾರ್ಷಿಕ ಅವಧಿಯಲ್ಲಿ ರೂ. 2.5625 ಕೋಟಿಗಳನ್ನು (ರೂ. 256.25 ಲಕ್ಷಗಳು) 20 ಕಂತುಗಳಲ್ಲಿ** ಪಾವತಿಸುವಂತೆ ಸಾಲ ಮರುಪಾವತಿ ವಿಧಾನವನ್ನು ಮರು ವಿನ್ಯಾಸಗೊಳಿಸಬಹುದಾಗಿದೆ.

(3) ಮೇಲ್ಕಂಡಂತೆ ಮರುವಿನ್ಯಾಸಗೊಳಿಸಿದ ಸರ್ಕಾರದ ಸಾಲದ ಮರುಪಾವತಿಯನ್ನು ನಿರ್ವಹಿಸಲು ಅನುಕೂಲವಾಗುವಂತೆ ಕಾರ್ಖಾನೆಯು ಜಛಿಡಿಠಿ ಚಿಛಿಛಿಠಣಟಿಣ ನ್ನು ತೆರೆಯುವುದು ;

(4) ಮರುವಿನ್ಯಾಸಗೊಳಿಸಿದ ಸಾಲದ ಮೇಲೆ ವಾರ್ಷಿಕ ಶೇ. 10ರ ಬಡ್ಡಿದರವನ್ನು ಕಾರ್ಖಾನೆಯು ಸಂದಾಯ ಮಾಡತಕ್ಕದ್ದು, ಕಾರ್ಖಾನೆಯು ಮರುವಿನ್ಯಾಸಗೊಳಿಸಿದ ಸಾಲವನ್ನು ಕ್ರಮಬದ್ಧವಾಗಿ ಮೇಲೆ ತಿಳಿಸಿದ (2)ರ ಪ್ರಕಾರ ಮರುಪಾವತಿಸಿದ್ದಲ್ಲಿ, ಬಡ್ಡಿಯನ್ನು ಈಕ್ವಿಟಿಯಾಗಿ ಪರಿವರ್ತಿಸಲು ಪರಿಶೀಲಿಸಲಾಗುವುದು ;

(5) ಕಾರ್ಖಾನೆಯು ಕೇಂದ್ರ ಸರ್ಕಾರ ಘೋಷಿಸಿರುವ ಕಬ್ಬಿನ ಕನಿಷ್ಠ ಬೆಂಬಲ ಬೆಲೆಗೆ ಸೀಮಿತಗೊಳಿಸಿ ರೈತರುಗಳಿಗೆ ಕಬ್ಬಿನ ಬೆಲೆಯನ್ನು ಪಾವತಿಸುವುದು. ಕನಿಷ್ಠ ಬೆಂಬಲ ಬೆಲೆಗಿಂತ ಹೆಚ್ಚುವರಿಯಾಗಿ ಪಾವತಿ ಮಾಡಬೇಕಾದಲ್ಲಿ, ವ್ಯತ್ಯಾಸದ ಮೊತ್ತವನ್ನು ಸದಸ್ಯರ ಈಕ್ವಿಟಿ ವಂತಿಕೆಯಾಗಿ ಕಾರ್ಖಾನೆಯಲ್ಲೇ ಉಳಿಸಿಕೊಳ್ಳಲು ಕ್ರಮ ಕೈಗೊಳ್ಳುವುದು. ಈ ಪದ್ದತಿಯನ್ನು ಕನಿಷ್ಠ 5 ವರ್ಷಗಳ ಅವಧಿಯವರೆಗೆ ಅಥವಾ ಕಾರ್ಖಾನೆಯು 3 ವರ್ಷಗಳು ನಿರಂತರವಾಗಿ ಲಾಭವನ್ನು ಹೊಂದುವವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸುವುದು ; ಮತ್ತು

(6) ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು 5000 ಟಿ.ಸಿ.ಡಿ. ಗೆ ವಿಸ್ತರಿಸುವ ಯೋಜನೆಯನ್ನು ಕಾರ್ಖಾನೆಯು ಲಾಭ ಪಡೆಯುವ ಸಾಮರ್ಥ್ಯವನ್ನು ಹೊಂದುವವರೆಗೆ ತಡೆಹಿಡಿಯತಕ್ಕದ್ದು, ಪ್ರಸ್ತುತ ವಿದ್ಯುತ್ ಸಹ ಘಟಕವನ್ನು (cogen plant) ಸ್ಥಾಪಿಸುವ ಕಾರ್ಯವನ್ನು ಕೈಗೆತ್ತಿಕೊಳ್ಳತಕ್ಕದ್ದು.

ಈ ಆದೇಶವನ್ನು ದಿನಾಂಕ 07-12-2009ರ ಎಫ್‌ಡಿ 78 ಆರ್‌ಎಲ್‌ಜಿ 08ರ ಮತ್ತು ದಿನಾಂಕ 02-02-2010ರ ಎಫ್‌ಡಿ 02 ಆರ್‌ಎಲ್‌ಜಿ 10ನೇ ಸಂಖ್ಯೆಯ ಅನಧಿಕೃತ ಟಿಪ್ಪಣಿಗಳಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ. 2125

**ಸಿ. ಶ್ರೀನಿವಾಸ್**
ಸರ್ಕಾರದ ಅಧೀನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ(ಸಹಕಾರಿ ಸಕ್ಕರೆ)

## FOREST, ECOLOGY AND ENVIRONMENT SECRETARIAT

Sub: Grant of quarry leases in respect of buildings materials such as sand, jelly, stones, boulders and laterite stones in forest areas of the Western Ghats region-relaxation given to Public Works Department and Ports and Inland Water Transport Department, Shimoga.

Read: 1. Government Order No. FEE 115 FFM 2001, dated : 26-02-2004.

2. Letter No. A5(6) GFL CR.. 35/09-10, dated : 30-07-2010 of the Principal Chief Conservator of Forests, Bangalore.

**Preamble:**

In Government Order read at (1) above, guidelines in the Annexure were issued by the State Government for grant of quarry lease in respect of building materials such as sand, jelly, stones, boulders and laterite stones in forest areas of the Western Ghats region of Karnataka.

The Principal Chief Conservator of Forests has sent additional information to Government in his letter dated : 30-07-2010 read at (2) above for Diversion of 18.00 ha. of forest land for quarrying of stones in Erekatte (Ft.Sy. No. 15), Harogoppa (Ft.Sy.No. 12) and Sidaginahal (Ft.Sy. No.1) villages in Shikaripura Taluka in favour of Executive Engineer, Public Works Department and Ports and Inland Water Transport Department, Shimoga.

He has further stated that since the material is required for development activities and the user agency is the Government Department, area was proposed for diversion. Further, this would help in controlling the entry of large number of private user agencies to the forest for quarrying purpose. Therefore, the condition Nos. 2,3,7,12,13 and 14 of G.O. No. FEE 115 FFM 2001, dated : 26-02-2004 may kindly be relaxed at Government level.

The proposal has been examined in detail and the following orders are issued.

**Government Order No.: FEE 181 FFM 2009, Bangalore Dated: 03-08-2010**

After considering the additional information of Principal Chief Conservator of Forests, Government are pleased to accord relaxation of Sl.No. 2,3,7,12,13 and 14 of the guidelines of the Annexure to the G.O. No. FEE 115 FFM 2001, dated : 26-02-2004 specifically for diversion of 18.00 ha. of forest land for quarrying of stones in Erekatte (Ft.Sy.No. 15), Harogoppa (Ft.Sy.No. 12) and Sidaginahal (Ft.Sy.No. 1) villages in Shikaripura Taluk in favour of Executive Engineer, Public Works Department and Ports and Inland Water Transport Department, Shimoga District.

This order issued with immediate effect and until further orders.

By Order and in the name of the Governor of Karnataka

**H.M. MALLIKARJUNA SWAMY**

Under Secretary to Government,

Forest, Ecology and Environment Department

P.R. No. 2127

## ಕಂದಾಯ ಸಚಿವಾಲಯ

**ವಿಷಯ** : ಶ್ರೀ ಹೆಚ್. ನಂಜಯ್ಯ, ವಿಶೇಷ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್.ಪುರ, ಬೆಂಗಳೂರು ಇವರನ್ನು ಸೇವೆಯಿಂದ ಅಮಾನತ್ತು ಮಾಡುವ ಬಗ್ಗೆ.

**ಓದಲಾಗಿದೆ** : ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ಇವರ ಪತ್ರ ಸಂಖ್ಯೆ : ಸಿಸಿಎ(2)ಸಿಆರ್/27/2010-11 ದಿನಾಂಕ : 4-8-2010.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ : 04-08-2010ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ರವರು ಶ್ರೀ ಹೆಚ್. ನಂಜಯ್ಯ, ವಿಶೇಷ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್.ಪುರ, ಬೆಂಗಳೂರು ರವರು ದಿನಾಂಕ : 30-07-2010ರಂದು ಮಧ್ಯಾಹ್ನ 12.00 ಗಂಟೆ ಸಮಯದಲ್ಲಿ ರೂ. 10,000/- ಗಳ ಲಂಚ ಹಣ ಸ್ವೀಕರಿಸುತ್ತಿದ್ದ ಸಮಯದಲ್ಲಿ ಮಾನ್ಯ ಲೋಕಾಯುಕ್ತರವರ ಬಲೆಗೆ ಸಿಕ್ಕಿ ಬಿದ್ದಿದ್ದು, ಇವರನ್ನು ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ ನಗರ ವಿಭಾಗ, ಬೆಂಗಳೂರು ರವರ ಬಂಧನ ತಿಳುವಳಿಕೆ ಪತ್ರ ದಿನಾಂಕ : 30-07-2010 ರಂತೆ ದಸ್ತಗಿರಿ ಮಾಡಿದ್ದು, ದಿನಾಂಕ : 30-07-2010 ರಿಂದ 7-8-2010ರವರೆಗೆ ನ್ಯಾಯಾಂಗ ಬಂಧನದಲ್ಲಿರುತ್ತಾರೆ. ಈ ಹಿನ್ನೆಲೆಯಲ್ಲಿ, ಶ್ರೀ ಹೆಚ್. ನಂಜಯ್ಯ, ವಿಶೇಷ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್.ಪುರ, ಬೆಂಗಳೂರು ಇವರನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 10(2)(ಎ) ರಡಿಯಲ್ಲಿ ಅಮಾನತ್ತುಗೊಳಿಸುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಹೆಚ್. ನಂಜಯ್ಯ, ವಿಶೇಷ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್.ಪುರ, ಬೆಂಗಳೂರು ರವರು ದಿನಾಂಕ : 30-07-2010 ರಂದು ರೂ. 10,000/-ಗಳ ಲಂಚ ಹಣ ಸ್ವೀಕರಿಸುತ್ತಿದ್ದ ಆರೋಪದ ಮೇಲೆ ಇವರನ್ನು ದಿನಾಂಕ : 30-07-2010 ರಿಂದ 07-08-2010 ರವರೆಗೆ ನ್ಯಾಯಾಂಗ ಬಂಧನದಲ್ಲಿ ಇರಿಸಿರುವುದರಿಂದ ಇವರನ್ನು ದಿನಾಂಕ : 30-07-2010 ರಿಂದ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತಿನಲ್ಲಿಡಲು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಕಂಇ 43 ಎಡಿಇ 2010, ಬೆಂಗಳೂರು, ದಿನಾಂಕ: 09.08.2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 10(2) (ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್. ನಂಜಯ್ಯ, ವಿಶೇಷ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್.ಪುರ, ಬೆಂಗಳೂರು ಇವರನ್ನು ದಿನಾಂಕ : 30-07-2010 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98 ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ ಮತ್ತು ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರ ಅನುಮತಿ ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ. 2128

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

## ಕಂದಾಯ ಸಚಿವಾಲಯ

**ವಿಷಯ** : ಶ್ರೀ ಇಸ್ಲಾಉದ್ದೀನ್ ವಿಶೇಷ ತಹಶೀಲ್ದಾರರು ಚಡಚಣ, ಇಂಡಿ ತಾಲ್ಲೂಕು, ಬಿಜಾಪುರ ಜಿಲ್ಲೆ, ಇವರನ್ನು ಸೇವೆಯಿಂದ ಬಿಡುಗಡೆಗೊಳಿಸುವ ಕುರಿತು.

**ಓದಲಾಗಿದೆ** :
1. ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 51 ಎಎಸ್‌ಡಿ 2008, ದಿನಾಂಕ : 23–05–2008.
2. ಸರ್ಕಾರದ ಅಧಿಸೂಚನೆ ಸಂಖ್ಯೆ : ಆರ್‌ಡಿ 515 ಎಎಸ್‌ಡಿ 2009, ದಿನಾಂಕ : 16–11–2009.
3. ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 83 ಆಸೇವ 2010, ದಿನಾಂಕ : 29–07–2010.
4. ಶ್ರೀ ಇಸ್ಲಾಉದ್ದೀನ್ ವಿಶೇಷ ತಹಶೀಲ್ದಾರರು ಚಡಚಣ, ಇಂಡಿ ತಾಲ್ಲೂಕು, ಬಿಜಾಪುರ ಜಿಲ್ಲೆ, ಇವರ ಮನವಿ ದಿನಾಂಕ : 02–08–2010.

**ಪ್ರಸ್ತಾವನೆ:**

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1977ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆ ಸಂಖ್ಯೆ : ಇ(1)872/2007–08/PSC, Dt. 10–01–2008 ರನ್ವಯ ಆಯ್ಕೆಗೊಂಡ 2006 ನೇ ಸಾಲಿನ 40 ಅಭ್ಯರ್ಥಿಗಳನ್ನು ಮೇಲೆ ಓದಲಾದ ಕ್ರ.ಸಂ.(1)ರ ದಿನಾಂಕ : 23–05–2008ರ ಸರ್ಕಾರದ ಅಧಿಸೂಚನೆಯಲ್ಲಿ ತಹಶೀಲ್ದಾರ್, ಗ್ರೂಪ್–ಬಿ ಹುದ್ದೆಗೆ ಪರಿವೀಕ್ಷಣೆಯ ಮೇಲೆ ನೇಮಿಸಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಪರೀಕ್ಷಾರ್ಥ ತಹಶೀಲ್ದಾರರಾಗಿ ನೇಮಕಗೊಂಡ (ಕ್ರ.ಸಂ.04) ಶ್ರೀ ಇಸ್ಲಾಉದ್ದೀನ್ ಇವರು ದಿನಾಂಕ : 09–06–2008 ರಂದು ಕಂದಾಯ ಇಲಾಖೆಯಲ್ಲಿ ಪರೀಕ್ಷಾರ್ಥ ತಹಶೀಲ್ದಾರ್ ಹುದ್ದೆಗೆ ಹಾಜರಾಗಿದ್ದು, ಪ್ರಸ್ತುತ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ : 16–11–2009 ರ ಅಧಿಸೂಚನೆಯನ್ವಯ ವಿಶೇಷ ತಹಶೀಲ್ದಾರ್, ಚಡಚಣ, ಇಂಡಿ ತಾಲ್ಲೂಕು, ಬಿಜಾಪುರ ಜಿಲ್ಲೆ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ಮೇಲೆ ಓದಲಾದ ಕ್ರ.ಸಂ. (3)ರ ದಿನಾಂಕ : 29–07–2010 ರ ಅಧಿಸೂಚನೆಯನ್ವಯ ಕೆ.ಎ.ಎಸ್. ಗ್ರೂಪ್ 'ಎ' (ಕಿರಿಯ ಶ್ರೇಣಿ) ಹುದ್ದೆಗೆ ಶ್ರೀ ಇಸ್ಲಾಉದ್ದೀನ್ ವಿಶೇಷ ತಹಶೀಲ್ದಾರರು ಚಡಚಣ, ಇಂಡಿ ತಾಲ್ಲೂಕು, ಬಿಜಾಪುರ ಜಿಲ್ಲೆ, ಇವರು ಆಯ್ಕೆಯಾಗಿರುವುದರಿಂದ ಮೇಲೆ ಓದಲಾದ ಕ್ರಮ ಸಂ : (04)ರ ದಿನಾಂಕ : 02–08–2010 ರ ತಮ್ಮ ಮನವಿಯಲ್ಲಿ ಕೆ.ಸಿ.ಎಸ್.ಆರ್. ನಿಯಮ 252(ಬಿ) ರನ್ವಯ ಸೇವೆಯಿಂದ ಬಿಡುಗಡೆಗೊಳಿಸಲು ಕೋರಿರುತ್ತಾರೆ. ಸದರಿಯವರ ಮನವಿಯನ್ನು ಪರಿಶೀಲಿಸಲಾಗಿ ಸದರಿಯವರು ಕೆ.ಎ.ಎಸ್. ಗ್ರೂಪ್–ಎ ಹುದ್ದೆಗೆ ಅರ್ಜಿಯನ್ನು ಸೂಕ್ತ ಮಾರ್ಗದಲ್ಲಿ ಸಲ್ಲಿಸಿರುವುದರಿಂದ ಕೆ.ಸಿ.ಎಸ್.ಆರ್. ನಿಯಮ 252(ಬಿ) ರನ್ವಯ ಸೇವೆಯಿಂದ ಬಿಡುಗಡೆಗೊಳಿಸಲು ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಆರ್‌ಡಿ 497 ಎಎಸ್‌ಡಿ 2010, ಬೆಂಗಳೂರು, ದಿನಾಂಕ: 06.08.2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಇಸ್ಲಾಉದ್ದೀನ್ ವಿಶೇಷ ತಹಶೀಲ್ದಾರರು ಚಡಚಣ, ಇಂಡಿ ತಾಲ್ಲೂಕು, ಬಿಜಾಪುರ ಜಿಲ್ಲೆ, ಇವರು ಕೆ.ಎ.ಎಸ್. ಗ್ರೂಪ್– 'ಎ' (ಕಿರಿಯ ಶ್ರೇಣಿ) ಹುದ್ದೆಗೆ ಸಿಆಸುಇ 83 ಅಸೇವ 2010, ದಿನಾಂಕ : 29–07–2010ರ ಅಧಿಸೂಚನೆಯಲ್ಲಿ ಆಯ್ಕೆಯಾಗಿರುವುದರಿಂದ, ತಹಶೀಲ್ದಾರ್ ಗುಂಪು–ಬಿ ಹುದ್ದೆಯ ಸೇವೆಯಿಂದ ಕರ್ನಾಟಕ ನಾಗರೀಕ ಸೇವಾ ನಿಯಮಗಳು ನಿಯಮ 252(ಬಿ) ರನ್ವಯ ಈ ಕೂಡಲೇ ಜಾರಿಗೆ ಬರುವಂತೆ ಸರ್ಕಾರವು ತಹಶೀಲ್ದಾರ್ ಹುದ್ದೆಯ ಸೇವೆಯಿಂದ ಇವರನ್ನು ಬಿಡುಗಡೆಗೊಳಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ. 2129

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ** : ಶಿವಮೊಗ್ಗ ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿ ಆವರಣದಲ್ಲಿರುವ ಹೆಚ್ಚುವರಿ ಜಮೀನು ಮತ್ತು ಕಟ್ಟಡವನ್ನು ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ (ಮಹಿಳಾ) ಇವರಿಗೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ** :
1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ : ರೇಬಿರೇ ಕ್ಷೇ/ಶಿವಮೊಗ್ಗ/ಕಟ್ಟಡ/24/08–09, ದಿನಾಂಕ : 12–07–2010.
2. ಜಂಟಿ ನಿರ್ದೇಶಕರು(ತ), ಉದ್ಯೋಗ ಮತ್ತು ತರಬೇತಿ ಇಲಾಖೆ ಇವರು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರಿಗೆ ಬರೆದ ಪತ್ರ ಸಂಖ್ಯೆ : ಉತಇ/ತ/ಕ–1/ ವಿವ–11/07–08, ದಿನಾಂಕ : 23–06–2010.

**ಪ್ರಸ್ತಾವನೆ:**

ಜಂಟಿ ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ರವರ ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಂತೆ ರೇಷ್ಮೆ ಇಲಾಖೆಯು ಶಿವಮೊಗ್ಗ ತಾಲ್ಲೂಕು, ನಿಧಿಗೆ ಹೋಬಳಿ, ವೀರಾಪುರ–11 ಗ್ರಾಮದ ಸರ್ವೆ ನಂ. 52, ಗಾಜನೂರಿನಲ್ಲಿ ಹೊಂದಿರುವ 10.27 ಎಕರೆ ಜಮೀನಿನಲ್ಲಿರುವ

ಒಂದು ರೇಷ್ಮೆ ರೀಲಿಂಗ್ ಕಾಂಪ್ಲೆಕ್ಸ್ ಕಟ್ಟಡ ಮತ್ತು ಒಂದು ಚಾಕಿ ಸಾಕಾಣಿಕಾ ಕೇಂದ್ರ ಕಟ್ಟಡವನ್ನು ಒಳಗೊಂಡಂತೆ ಖಾಲಿ ಇರುವ ಅಂದಾಜು 6 ಎಕರೆ ಜಮೀನನ್ನು ಕಂದಾಯ ಇಲಾಖೆ, ಶಿವಮೊಗ್ಗ ಇವರ ಮುಖಾಂತರ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ (ಮಹಿಳಾ) ಶಿವಮೊಗ್ಗ ಇವರಿಗೆ ಹಸ್ತಾಂತರಿಸುವಂತೆ ರೇಷ್ಮೆ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರನ್ನು ಕೋರಿರುವ ಬಗ್ಗೆ ಹಾಗೂ ರೇಷ್ಮೆ ಉಪ ನಿರ್ದೇಶಕರು, ಜಿಲ್ಲಾ ಪಂಚಾಯತ್, ಶಿವಮೊಗ್ಗರವರು ಇದನ್ನು ಶಿಫಾರಸ್ಸು ಮಾಡಿರುವ ಬಗ್ಗೆ ತಿಳಿಸಿ ಅವರು ಶಿಫಾರಸ್ಸು ಮಾಡಿರುವಂತೆ ರೇಷ್ಮೆ ರೀಲಿಂಗ್ ಕಾಂಪ್ಲೆಕ್ಸ್ ಕಟ್ಟಡ ಮತ್ತು ಒಂದು ಚಾಕಿ ಸಾಕಾಣಿಕಾ ಕೇಂದ್ರ ಕಟ್ಟಡವನ್ನು ಖಾಲಿ ಇರುವ ಅಂದಾಜು 6 ಇಕರೆ ಜಮೀನನ್ನು ಕಂದಾಯ ಇಲಾಖೆ, ಶಿವಮೊಗ್ಗರವರ ಮುಖಾಂತರ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ (ಮಹಿಳಾ) ಪತ್ರ ಸಂಖ್ಯೆ : ವಾಕೈ 27 ರೇಯೋವಿ 2007, ದಿನಾಂಕ : 24–5–2008ರ ಷರತ್ತು ಹಾಗೂ ನಿಬಂಧನೆಗಳನ್ವಯ ಹಸ್ತಾಂತರಿಸಬಹುದಾಗಿದ್ದು, ಈ ಬಗ್ಗೆ ರೇಷ್ಮೆ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಮೇಲೆ ಓದಲಾದ ಕ್ರಮಸಂಖ್ಯೆ (1)ರ ಪತ್ರದಲ್ಲಿ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ರೇಷ್ಮೆ ಆಯುಕ್ತರು ಶಿಫಾರಸ್ಸು ಮಾಡಿರುವಂತೆ ಕಟ್ಟಡ ಹಾಗೂ ಜಮೀನು ನೀಡಲು ತೀರ್ಮಾನಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ವಾಕೈ 18 ರೇಯೋವಿ 2010, ಬೆಂಗಳೂರು, ದಿನಾಂಕ: 06.08.2010**

ರೇಷ್ಮೆ ಇಲಾಖೆಯ ಶಿವಮೊಗ್ಗ ತಾಲ್ಲೂಕು, ನಿಧಿಗೆ ಹೋಬಳಿ, ವೀರಾಪುರ–11 ಗ್ರಾಮದ ಸರ್ವೆ ನಂ. 52, ಗಾಜನೂರಿನಲ್ಲಿ ಹೊಂದಿರುವ ಒಂದು ರೇಷ್ಮೆ ರೀಲಿಂಗ್ ಕಾಂಪ್ಲೆಕ್ಸ್ ಕಟ್ಟಡ ಮತ್ತು ಒಂದು ಚಾಕಿ ಸಾಕಾಣಿಕಾ ಕೇಂದ್ರ ಕಟ್ಟಡವನ್ನು ಒಳಗೊಂಡಂತೆ ಖಾಲಿ ಇರುವ ಅಂದಾಜು 6 ಎಕರೆ ಜಮೀನನ್ನು ಕಂದಾಯ ಇಲಾಖೆ, ಶಿವಮೊಗ್ಗ ಇವರ ಮುಖಾಂತರ ಪತ್ರ ಸಂಖ್ಯೆ : ವಾಕೈ 27 ರೇಯೋವಿ 2007, ದಿನಾಂಕ : 24–5–2008ರ ಷರತ್ತು ಹಾಗೂ ನಿಬಂಧನೆಗಳನ್ವಯ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ (ಮಹಿಳಾ) ಶಿವಮೊಗ್ಗ ಇವರಿಗೆ ಹಸ್ತಾಂತರಿಸಲು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ. 2130

**ಬಿ. ದೇವಿಕ**
ಸರ್ಕಾರದ ಅಧೀನ ಕಾರ್ಯದರ್ಶಿ (ರೇಷ್ಮೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ** : ಶ್ರೀ ಟಿ.ಹಾಲಸ್ವಾಮಿ, ಜಂಟಿ ನಿರ್ದೇಶಕರು, ನಿಯೋಜನೆ ಮೇರೆಗೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ತೆಂಗಿನ ನಾರಿನ ಅಭಿವೃದ್ಧಿ ನಿಗಮ (ನಿ) ರವರು ಈ ಹಿಂದೆ ಕಾರ್ಯನಿರ್ವಾಹಕಾಧಿಕಾರಿ, (ಖಾಗ್ರಾ) ಜಿಲ್ಲಾ ಪಂಚಾಯತ್, ದಕ್ಷಿಣ ಕನ್ನಡ ಜಿಲ್ಲೆ, ಇಲ್ಲಿ ಕಾರ್ಯನಿರ್ವಹಿಸುತ್ತಿರುವ ಅವಧಿಯಲ್ಲಿ ಎಸಗಿರುವ ಆರೋಪಗಳ ಸಂಬಂಧ ಇಲಾಖಾ ವಿಚಾರಣೆ ಕೈಬಿಡುವ ಬಗ್ಗೆ.

**ಓದಲಾಗಿದೆ** :
1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಮಂಗಳೂರು, ಇವರ ಪತ್ರ ಸಂಖ್ಯೆ : ದಕಜಿಪ/ಉಪ/ಖಾಗ್ರಾ/ಟೂಲ್ ಕಿಟ್ಸ್/1994–95, ದಿ : 27–05–2009 (ಪುಟ 21).
2. ಕೈಗಾರಿಕಾಭಿವೃದ್ಧಿ ಆಯುಕ್ತರ ಪತ್ರ ಸಂಖ್ಯೆ : ಕೈವಾಇ/ನಿರೀಕ್ಷಣೆ–2/ದೂರು/163/2009–10, ದಿ : 12–10–2009 (ಪುಟ 28).
3. ಕಾರಣ ಕೇಳುವ ನೋಟೀಸ್ ದಿ : 12–11–2009. (ಪುಟ 30).
4. ಕಾರಣ ಕೇಳುವ ನೋಟೀಸ್‌ಗೆ ಅಧಿಕಾರಿಯ ಹೇಳಿಕೆ ದಿನಾಂಕ: 20–01–2010 (ಪುಟ 136).
5. ಸರ್ಕಾರದ ಪತ್ರ ಸಂಖ್ಯೆ: ವಾಕೈ 161 ಕೈಸೇವಿ 2009, ದಿನಾಂಕ: 11–02–2010 (ಪುಟ 140).
6. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಮಂಗಳೂರು, ಇವರ ಪತ್ರ ಸಂಖ್ಯೆ: ದಕಜಿಪ/ಉಪ/ಖಾಗ್ರಾ/ಟೂಲ್ ಕಿಟ್ಸ್/1994–95, ದಿನಾಂಕ:20–07–2010 (ಪುಟ 142).

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು ರವರು 1994–95ನೇ ಸಾಲಿನ ಗಿರಿಜನ ಉಪ ಯೋಜನೆಯಡಿ ಕೊರಗರಿಗೆ ಬುಟ್ಟಿ ಹೆಣೆಯುವ ಕೆಲಸಕ್ಕೆ ಅವಶ್ಯವುಳ್ಳ ಟೂಲ್ ಕಿಟ್‌ಗಳನ್ನು ಮೆ: ಗೌರಿ ಎಂಟರ್‌ಪ್ರೈಸಸ್, ಬೆಂಗಳೂರು, ಇವರು ಸರಬರಾಜು ಮಾಡಿರುವ ಬಾಬ್ತು ಪಾವತಿಗೆ ಬಾಕಿಯಿರುವ ಮೊತ್ತ ರೂ. 6,97,854.00 (ರೂಪಾಯಿ ಆರು ಲಕ್ಷದ ತೊಂಬತ್ತೇಳು ಸಾವಿರದ ಎಂಟು ನೂರ ಐವತ್ತ ನಾಲ್ಕು ಮಾತ್ರ) ಸದರಿ ಸಂಸ್ಥೆಗೆ ಪಾವತಿಸಲು ದಿ : 13–06–2008 ರಂದು ನ್ಯಾಯಾಲಯದ ಆದೇಶವಾಗಿರುವುದರತ್ತ ಗಮನ ಸೆಳೆದು ಈ ನಷ್ಟಕ್ಕೆ ಕಾರಣರಾದ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ನ್ಯಾಯಾಲಯದ ಆದೇಶಾನುಸಾರ ಬಾಕಿಯನ್ನು ಮೆ : ಗೌರಿ ಎಂಟರ್‌ಪ್ರೈಸಸ್, ಬೆಂಗಳೂರು, ಇವರಿಗೆ ಜಿಲ್ಲಾ ಪಂಚಾಯತಿಯಿಂದ ಪಾವತಿಸಲು ಜಿಲ್ಲಾ ಪಂಚಾಯತ್ ಕ್ರಮ ಕೈಗೊಂಡಿರುತ್ತದೆ. ಪ್ರಕರಣಕ್ಕೆ ಸಂಬಂಧಿಸಿದಂತೆ, ಈ ನಷ್ಟಕ್ಕೆ ಕಾರಣರಾದ ತಪ್ಪಿತಸ್ಥ ಅಧಿಕಾರಿಗಳ ಮಾಹಿತಿಯನ್ನು ಸಂಗ್ರಹಿಸಿ ಅವರುಗಳ ಮೇಲೆ ಆರೋಪಗಳ ಪಟ್ಟಿಯನ್ನು (ಅನುಬಂಧ 1 ರಿಂದ 4) ಸಿದ್ದಪಡಿಸಿ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು, ಶ್ರೀ ಟಿ. ಹಾಲಸ್ವಾಮಿ ಕಾರ್ಯ ನಿರ್ವಾಹಕ ವ್ಯವಸ್ಥಾಪಕರು, ಖಾದಿ ಮತ್ತು ಗ್ರಾಮೋದ್ಯೋಗ ಇಲಾಖೆ, ಜಿಲ್ಲಾ ಪಂಚಾಯತ್, ಮಂಗಳೂರು, ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಟೂಲ್ ಕಿಟ್ ಸರಬರಾಜಿನಲ್ಲಿ ಅವ್ಯವಹಾರ ಎಸಗಿರುವ ಬಗ್ಗೆ ಪರಿಶೀಲಿಸಿ ಸದರಿಯವರ ಮೇಲೆ ಇಲಾಖಾ ವಿಚಾರಣೆ ನಡೆಸಲು ಶಿಫಾರಸ್ಸು ಮಾಡಲಾಗಿರುತ್ತದೆ.

ಮೇಲೆ ಓದಲಾದ (3)ರ ಕಾರಣ ಕೇಳುವ ನೋಟೀಸ್‌ನಲ್ಲಿ ಶ್ರೀ ಟಿ ಹಾಲಸ್ವಾಮಿ, ಜಂಟಿ ನಿರ್ದೇಶಕರು, ನಿಯೋಜನೆ ಮೇರೆಗೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ತೆಂಗಿನ ನಾರಿನ ಅಭಿವೃದ್ಧಿ ನಿಗಮ (ನಿ), ಬೆಂಗಳೂರು, ಇವರು ಈ ಹಿಂದೆ ಕಾರ್ಯನಿರ್ವಾಹಕ ವ್ಯವಸ್ಥಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ 1994–95 ಟೂಲ್ ಕಿಟ್‌ನ ಸರಬರಾಜು ಮಾಡುವ ಕಾರ್ಯಕ್ರಮದಲ್ಲಿ ಸರ್ಕಾರದ ನೀತಿ ನಿಯಮಗಳನ್ನು ಉಲ್ಲಂಘಿಸಿರುವುದು ; ಕಾರ್ಯಕ್ರಮಗಳನ್ನು ನಿರ್ವಹಿಸುವಲ್ಲಿ ನಿಯಮಗಳನ್ನು ಪಾಲಿಸದೇ ಅಧಿಕಾರದ ದುರುಪಯೋಗ ; ಕರ್ತವ್ಯದ ನಿರ್ಲಕ್ಷ್ಯತನ ಮತ್ತು ಕೆಲವು ನ್ಯೂನತೆಗಳು, ಕರ್ತವ್ಯ ಲೋಪಗಳನ್ನು ಎಸಗಿರುವುದು ಹಾಗೂ ಕಳಪೆ ಗುಣಮಟ್ಟದ ಉಪಕರಣಗಳ ಸರಬರಾಜು, ಖರೀದಿ ನಿಯಮಗಳನ್ನು ಪಾಲಿಸದೆ ಇರುವುದು ಟೂಲ್‌ಕಿಟ್‌ಗಳ ಹಣ ಪಾವತಿಗೆ ಕಾರಣರಾಗಿರುವುದು ಸರ್ಕಾರದ ಆರ್ಥಿಕ ನಷ್ಟಕ್ಕೆ ಹೊಣೆಗಾರರಾಗಿರುವುದು ; ಅವ್ಯವಹಾರ ಎಸಗಿರುವ ಆರೋಪಗಳಿಗೆ ಸಂಬಂಧಿಸಿದಂತೆ ದೋಷಾರೋಪಣಾ ಪಟ್ಟಿ ಅನುಬಂಧ 1 ರಿಂದ 4ನ್ನು ಕಳುಹಿಸಿ, ಈ ಆರೋಪಗಳಿಗೆ ಸಂಬಂಧಿಸಿದಂತೆ, ನೋಟೀಸ್ ಜಾರಿಗೊಳಿಸಲಾಗಿತ್ತು.

ಮೇಲೆ ಓದಲಾದ (4)ರಲ್ಲಿ ಶ್ರೀ ಟಿ. ಹಾಲಸ್ವಾಮಿ, ಜಂಟಿ ನಿರ್ದೇಶಕರು, ನಿಯೋಜನೆ ಮೇರೆಗೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ತೆಂಗಿನ ನಾರಿನ ಅಭಿವೃದ್ಧಿ ನಿಗಮ (ನಿ), ಬೆಂಗಳೂರು, ರವರು ಸರ್ಕಾರದ ಕಾರಣ ಕೇಳುವ ನೋಟೀಸ್‌ಗೆ ಪರಿಪೂರ್ಣವಾದ ವಿವರಗಳೊಂದಿಗೆ ಅಗತ್ಯ ಮಾಹಿತಿ ದಾಖಲಾತಿಗಳೊಂದಿಗೆ ಲಿಖಿತ ರಕ್ಷಣಾ ಹೇಳಿಕೆಯನ್ನು ನೀಡಿ ಸರ್ಕಾರದ ಹಂತದಲ್ಲಿ ರಕ್ಷಣಾ ಹೇಳಿಕೆಯನ್ನು ಅಂಗೀಕರಿಸಿ ಯಾವುದೇ ಇಲಾಖಾ ವಿಚಾರಣೆಯನ್ನು ನಡೆಸದೆ ಮುಂದಿನ ಎಲ್ಲಾ ನಡವಳಿಗಳನ್ನು ಕೈಬಿಟ್ಟು ಸಕಲ ದೋಷಗಳಿಂದ ದೋಷಮುಕ್ತಗೊಳಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (5)ರ ಪತ್ರದಲ್ಲಿ ಶ್ರೀ ಟಿ. ಹಾಲಸ್ವಾಮಿ, ಜಂಟಿ ನಿರ್ದೇಶಕರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ರಕ್ಷಣಾ ಹೇಳಿಕೆಯನ್ನು ಮುಖ್ಯ ಕಾರ್ಯನಿರ್ವಹಣಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು, ಇವರಿಗೆ ಕಳುಹಿಸಿ ನಿಯಮಾನುಸಾರ ಹಾಗೂ ಕಾನೂನು ರೀತ್ಯಾ ಪರಿಶೀಲಿಸಿ, ಪರಿಗಣಿತ ಅಭಿಪ್ರಾಯದೊಂದಿಗೆ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಕೋರಲಾಗಿತ್ತು.

ಮೇಲೆ ಓದಲಾದ (6) ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ದಕ್ಷಿಣ ಕನ್ನಡ, ಜಿಲ್ಲಾ ಪಂಚಾಯತ್, ಮಂಗಳೂರು, ರವರು ಕಳಪೆ ಗುಣಮಟ್ಟದ ಟೂಲ್‌ಕಿಟ್‌ಗಳನ್ನು ಸರಬರಾಜು ಮಾಡಿದ ಪ್ರಕರಣಕ್ಕೆ ಸಂಬಂಧಿಸಿದಂತೆ, ವಿಷಯವನ್ನು ಮರು ಪರಿಶೀಲಿಸಿ ಕಳಪೆ ಸಾಮಗ್ರಿಗಳು ಉತ್ತಮ ಗುಣಮಟ್ಟದ ಸಾಮಗ್ರಿಗಳಾಗುತ್ತವೆ ಎಂಬುವುದಾಗಿ ದೃಢೀಕರಣ ಪತ್ರ ನೀಡಿ ಸಾಮಾಗ್ರಿಗಳನ್ನು ಸ್ವೀಕರಿಸಿರುವ ಬಂಟ್ವಾಳ, ಮಂಗಳೂರು, ಕಾರ್ಕಳ, ಕುಂದಾಪುರ ತಾಲ್ಲೂಕಿನ ಕೈಗಾರಿಕಾ ವಿಸ್ತರಣಾಧಿಕಾರಿಗಳ ಪಾತ್ರವನ್ನು ಪರಿಶೀಲಿಸಿ ಸಂಬಂಧಿತರ ಹೇಳಿಕೆಯನ್ನು ಪಡೆದು ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಹೊಣೆಗಾರರು ಯಾರು ಎಂಬುದನ್ನು ಆಧರಿಸಿ ಪಟ್ಟಿಯನ್ನು ಅವರ ವಿರುದ್ಧ ರಚನೆ ಮಾಡಬೇಕಾಗುತ್ತದೆ ಎಂದು ಷರಾ ಮಾಡಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ವಾಕೈ 161 ಕೈಸೇವಿ 2009, ಬೆಂಗಳೂರು, ದಿನಾಂಕ: 04.08.2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮುಖ್ಯ ಕಾರ್ಯನಿರ್ವಾಹಕಾಧಿಕಾರಿ, ಜಿಲ್ಲಾ ಪಂಚಾಯತ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ಇವರ ವರದಿಯ ಆಧಾರದ ಮೇಲೆ ಶ್ರೀ ಟಿ. ಹಾಲಸ್ವಾಮಿ, ಜಂಟಿ ನಿರ್ದೇಶಕರು, ರವರು ಸರ್ಕಾರದ ಕಾರಣ ಕೇಳುವ ನೋಟೀಸ್‌ಗೆ ನೀಡಿರುವ ವಿವರಗಳನ್ನು ಒಪ್ಪಿ ಟೂಲ್‌ಕಿಟ್ ಸರಬರಾಜಿಗೆ ಸಂಬಂಧಿಸಿದಂತೆ, ಅವರ ಮೇಲೆ ಇಲಾಖಾ ವಿಚಾರಣೆ ನಡೆಸುವುದನ್ನು ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ. 2131

**ಬಿ.ಸಿ. ಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

## ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ತಿದ್ದುಪಡಿ ಆದೇಶ**

**ಸಂಖ್ಯೆ: ಲೋಇ 169 ಇಎಪಿ 2009 ದಿನಾಂಕ: 30–07–2010.**

**ವಿಷಯ :** **ಸೆಪ್ಟೆಂಬರ್ 2009ರ ಮಾಹೆಯಲ್ಲಿ ಮಳೆಯ ಪ್ರವಾಹಕ್ಕೆ ತುಂಗಭದ್ರ (ಮಂತ್ರಾಲಯ) ನದಿಗೆ ಅಡ್ಡಲಾಗಿ ನಿರ್ಮಿಸಿದ್ದ ಸೇತುವೆ ಹಾನಿಗೊಂಡಿದ್ದು, ಸಾರ್ವಜನಿಕರ ಸಂಚಾರಕ್ಕೆ ಪುನರ್‌ನಿರ್ಮಾಣ ಮಾಡುವ ಬಗ್ಗೆ.**

**ಉಲ್ಲೇಖ :**
1. ಸರ್ಕಾರದ ಆದೇಶ ಸಂಖ್ಯೆ: ಲೋಇ 169 ಇಎಪಿ 2009 ಬೆಂಗಳೂರು ದಿನಾಂಕ: 11–05–2010.
2. ನಬಾರ್ಡ್ ಪತ್ರ ಸಂಖ್ಯೆ: NB/SPD/1008/RIDF-XVI (Karnataka RO)/110 PSC/2010-2011 ದಿನಾಂಕ: 28–06–2010.

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ರಾಯಚೂರು ಜಿಲ್ಲೆಯ ದೇವಸುಗೂರು–ಕಟ್ಟಿಗೋಡ ರಾಜ್ಯ ಹೆದ್ದಾರಿ–13ರ ಮೇಲೆ ತುಂಗಭದ್ರಾ ನದಿಗೆ (ಮಂತ್ರಾಲಯ) ಅಡ್ಡಲಾಗಿ ಸೇತುವೆ ಪುನರ್ ನಿರ್ಮಾಣ ಕಾಮಗಾರಿಯ 40.00 ಕೋಟಿ ರೂ.ಗಳ (ನಲವತ್ತು ಕೋಟಿ ರೂಪಾಯಿಗಳು ಮಾತ್ರ) ಅಂದಾಜು ಮೊತ್ತಕ್ಕೆ ಲೆಕ್ಕಶೀರ್ಷಿಕೆ '5054 ರಸ್ತೆ ಮತ್ತು ಸೇತುವೆಗಳು" ಅಡಿಯಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿತ್ತು.

ಆದರೆ ಸದರಿ ಕಾಮಗಾರಿಯ ಅಂದಾಜಿಗೆ ಮೇಲೆ ಓದಲಾದ (2) ರಂತೆ ನಬಾರ್ಡ್‌ನ ಆರ್‌ಐಡಿಎಫ್ 16ರ ಯೋಜನೆಯಡಿ ಅನುಮೋದನೆ ದೊರೆತಿರುವ ಹಿನ್ನೆಲೆಯಲ್ಲಿ ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿನ ಆದೇಶ ಭಾಗದ ಕಂಡಿಕೆ (೧) ಅನ್ನು ಕೆಳಗೆ ಮಾರ್ಪಡಿಸಿದಂತೆ ಓದಿಕೊಳ್ಳತಕ್ಕದ್ದು.

ರಾಯಚೂರು ಜಿಲ್ಲೆಯ ದೇವಸುಗೂರು–ಕಟ್ಟಿಗೋಡು ರಾಜ್ಯ ಹೆದ್ದಾರಿ–13ರ ಮೇಲೆ ತುಂಗಭದ್ರಾ ನದಿಗೆ (ಮಂತ್ರಾಲಯ) ಅಡ್ಡಲಾಗಿ ಸೇತುವೆ ಪುನರ್ ನಿರ್ಮಾಣ ಕಾಮಗಾರಿಯ 39.50 ಕೋಟಿ ರೂ.ಗಳ (ಮೂವತ್ತೊಂಬತ್ತು ಕೋಟಿ ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಅಂದಾಜು ಮೊತ್ತಕ್ಕೆ ಲೆಕ್ಕಶೀರ್ಷಿಕೆ "5054-Capital outlay on roads and bridges-04-800-3-01-436 NABARD assisted works" ಅಡಿಯಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ ಹಾಗೂ ಕಾಮಗಾರಿಯನ್ನು ಕೈಗೊಂಡು ದಿನಾಂಕ 31–03–2012ರೊಳಗೆ ಪೂರ್ಣಗೊಳಿಸಲು ಮತ್ತು ಈ ಕಾಮಗಾರಿಗೆ

ಮಾಡಲಾಗುವ ವೆಚ್ಚಕ್ಕೆ ಮರುಪಾವತಿ ಪ್ರಸ್ತಾವನೆಯನ್ನು ಕಾಲಕಾಲಕ್ಕೆ ಸರ್ಕಾರಕ್ಕೆ ಸಲ್ಲಿಸುವಂತೆ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ದೇವಿಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ

ಲೋಕೋಪಯೋಗಿ, ಬಂದರು ಹಾಗೂ

ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

ಪಿ.ಆರ್. 2146

## COMMERCE AND INDUSTRIES SECRETARIAT

**CORRIGENDUM**

**No. CI/43/SPI/2010, Bangalore, dated: 16-07-2010.**

Sub: Approval to the proposal of M/s. Surya Vijayanagar Steel & Power Ltd., - Additional Water Allocation.

Read:
1. Govt. Order No. CI 43 SPI 2010, dated: 25-02-2010.
2. Govt. Order No. CI 43 SPI 2010, dated: 10-05-2010.
3. Proceedings of the 22nd State High Level Clearance Committee (SHLCC) Meeting held on 24-05-2010.
4. Govt. Order No. CI 43 SPI 2010, dated: 11-06-2010.
5. Proceedings of the 23rd State High Level Clearance Committee (SHLCC) Meeting held on 19-06-2010.

In the order portion of the Govt. Order No. CI 43 SPI 2010, dated: 11-06-2010, with regard to water allocation, please be read as **"allocation of 45 MGD of water from the nearest water source subject to the approval of the Water Resource Departmnet"** in place of "30 MGD from nearest source" and recommended KIADB to acquire and allot 500 acres of land for housing project at the proposed site in Bagalkot District.

By Order and in the name of the Governor of Karnataka

**(Aparna Pavate)**

Desk Officer (Technical Cell)

Commerce & Industries Department

PR No. 2147

## COMMERCE AND INDUSTRIES SECRETARIAT

**CORRIGENDUM**

**No. CI/273/SPI/2009, Bangalore, dated: 21-07-2010.**

Sub: Approval to the proposal of M/s. TATA Metaliks Ltd., to establish a "3 MTPA Integrated Steel Plant, in Boodagatti and Agadi Village, Haveri Taluk & District - Additional Investment, Employment and Villages.

Read:
1. Govt. Order No. CI 273 SPI 2009, dated: 07-05-2010.
2. Proceedings of the 23rd State High Level Clearance Committee (SHLCC) meeting held on 19-06-2010.

In the Govt. Order No. CI 273 SPI 2009, dated: 07-05-2010, in the order portion please read as **"3 Million TPA Integrated Steel Plant with an enhanced investment of Rs. 15000 crores, to provide total employment to 25000 persons in Boodagatti and Agadi village limits of Haveri Taluk with addition of Devagiri and Yellapura Villages for housing purpose"** in place of **"3 Million MTPA with an investment of Rs. 6101.41 crores in Boodagatti and Agadi Village limits in Haveri Taluk".**

Infrastructure facilities, incentives, concessions and other terms and conditions remain the same as in the G.O. read at (1) above.

By Order and in the name of the Governor of Karnataka

**(Aparna Pavate)**

Desk Officer (Technical Cell)

Commerce & Industries Department

PR No. 2148

## COMMERCE AND INDUSTRIES SECRETARIAT

### CORRIGENDUM

**No. CI/31/SPI/2010, Bangalore, dated: 21-07-2010.**

Sub: Approval to the Project proposal of M/s. Shree Cement Ltd., to establish "3MTPA Cement Plant" at Sedam Taluk, Gulbarga District.

Read: 1. Govt. Order No. CI 31 SPI 2010, dated: 15-02-2010.

2. Govt. Order No. CI 31 SPI 2010, dated: 14-06-2010.

3. Proceedings of the 23rd State High Level Clearance Committee (SHLCC) meeting held on 19-06-2010.

In the Govt. Order No. CI 31 SPI 2010, Dated: 14-06-2010 please read as **"3 Million Metric Tons Per Annum Cement Plant with 150 MW Power Plant"** in place of "3 Million Metric Tons Per Annum Cement Plant with 35 MW Captive Power Plant" The investment may please be read as **"Rs. 1450 Crores"** in place of "Rs. 1000 Crores".

Infrastructure facilities, incentives, concessions and other terms and conditions remain the same as in the G.O. read at (1) above.

By Order and in the name of the Governor of Karnataka

PR No. 2149

**(Aparna Pavate)**
Desk Officer (Technical Cell)
Commerce & Industries Department

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ : ಹೊಸ ಕೈಗಾರಿಕಾ ನೀತಿ 2009–14 – ಮೂರನೇ ತಿದ್ದುಪಡಿ ಆದೇಶ.**

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಸಿಐ.233.ಎಸ್.ಪಿ.ಐ. 2008 ದಿನಾಂಕ: 28–02–2009.

2. ಸರ್ಕಾರಿ ತಿದ್ದುಪಡಿ ಆದೇಶ ಸಂಖ್ಯೆ: ಸಿಐ. 233, ಎಸ್.ಪಿ.ಐ. 2008, ದಿನಾಂಕ: 06–08–2009.

3. ಸರ್ಕಾರಿ ತಿದ್ದುಪಡಿ ಆದೇಶ ಸಂಖ್ಯೆ: ಸಿಐ. 233 ಎಸ್.ಪಿ.ಐ. 2008, ದಿನಾಂಕ: 25–02–2010.

4. ದಿನಾಂಕ: 24–4–2010ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆರವರ ಅಧ್ಯಕ್ಷತೆಯಲ್ಲಿ ನಡೆದ 100ನೇ ರಾಜ್ಯ ಮಟ್ಟದ ಸಮನ್ವಯ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಕರ್ನಾಟಕ ಸರ್ಕಾರವು ದಿನಾಂಕ: 1–4–2009 ರಿಂದ ಜಾರಿಗೆ ಬರುವಂತೆ ನೂತನ ಕೈಗಾರಿಕಾ ನೀತಿ 2009–14ನ್ನು ಉಲ್ಲೇಖ (3)ರ ಸರ್ಕಾರಿ ಆದೇಶದಂತೆ ಜಾರಿಗೊಳಿಸಿರುತ್ತದೆ. ಈ ಆದೇಶವು ಕರ್ನಾಟಕ ರಾಜ್ಯಪತ್ರ, ವಿಶೇಷ ಪತ್ರಿಕೆ ಭಾಗ (1)ರಲ್ಲಿ ದಿನಾಂಕ 5–03–2009ರಂದು ಅಧಿಕೃತವಾಗಿ ಕನ್ನಡ ಮತ್ತು ಆಂಗ್ಲ ಭಾಷೆಗಳಲ್ಲಿ ಪ್ರಕಟವಾಗಿರುತ್ತದೆ. ಅದರಂತೆ, ಆಂಗ್ಲ ಭಾಷೆ ಮತ್ತು ಕನ್ನಡ ಭಾಷೆಯ ನೀತಿಗಳಲ್ಲಿ ಕೆಲವು ವ್ಯತ್ಯಾಸಗಳಿದ್ದು, ಇದು ಆಂಗ್ಲ ಭಾಷೆಯಿಂದ ಕನ್ನಡ ಭಾಷೆಗೆ ಭಾಷಾಂತರಿಸುವ ಸಂದರ್ಭದಲ್ಲಿ ವ್ಯತ್ಯಾಸಗಳಾಗಿದ್ದು, ಈ ಬಗ್ಗೆ ದಿನಾಂಕ: 24–4–2010ರಂದು ಪ್ರಧಾನ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆರವರ ಅಧ್ಯಕ್ಷತೆಯಲ್ಲಿ 100ನೇ ರಾಜ್ಯ ಮಟ್ಟದ ಸಮನ್ವಯ ಸಮಿತಿಯ ಸಭೆಯಲ್ಲಿ ಚರ್ಚಿಸಿದ್ದು, ಆಂಗ್ಲ ಭಾಷೆಯಲ್ಲಿರುವಂತೆಯೇ ಕನ್ನಡ ಭಾಷೆಯಲ್ಲಿಯೂ ಕೈಗಾರಿಕಾ ನೀತಿಯನ್ನು ಸರಿಪಡಿಸುವಂತೆ ತೀರ್ಮಾನಿಸಲಾಗಿರುತ್ತದೆ. ಇದರಿಂದ ಸರ್ಕಾರಕ್ಕೆ ಯಾವುದೇ ಹೆಚ್ಚುವರಿ ಹೊರೆಯಾಗುವುದಿಲ್ಲ. ಇದರಂತೆ ಉಲ್ಲೇಖ (3)ರ ಸರ್ಕಾರಿ ಆದೇಶದಂತೆ ಕನ್ನಡ ಭಾಷೆಯಲ್ಲಿರುವ ಕೈಗಾರಿಕಾ ನೀತಿಯಲ್ಲಿನ ವ್ಯತ್ಯಾಸಗಳನ್ನು ಕೆಳಕಂಡಂತೆ ಸರಿಪಡಿಸಲಾಗಿದ್ದು, ಅದರಂತೆ ಓದಿಕೊಳ್ಳಲು ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 233 ಎಸ್‌ಪಿಐ 2008, ಬೆಂಗಳೂರು ದಿನಾಂಕ: 05–08–2010.**

**(1) ಮಾರ್ಚ್ 5, 2009ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ಹೊಸ ಕೈಗಾರಿಕಾ ನೀತಿ 2009–14ರ (ಕನ್ನಡ ಅನುವಾದ) ಅನುಬಂಧ–2 ಕಂಡಿಕೆ ಸಂಖ್ಯೆ 9ರ**

**ಈ ಕೆಳಗಿನ ಮಾಹಿತಿಯನ್ನು**

| ಹೂಡಿದ ಬಂಡವಾಳ (ಕೋಟಿ ರೂ.ಗಳಲ್ಲಿ) | ಕನಿಷ್ಠ ಉದ್ಯೋಗ ನೀಡಿಕೆ | ಬಡ್ಡಿ ರಹಿತ ಸಾಲದ ಮೊತ್ತ |
|---|---|---|
| 51–250 | ಕನಿಷ್ಠ 200 ಆನಂತರದ ಪ್ರತಿ 50 ಕೋಟಿ ರೂ. ಬಂಡವಾಳ ಹೂಡಿಕೆಗೆ 50 ರಂತೆ | 6 ವರ್ಷಗಳಿಗೆ ಲೆಕ್ಕ ಹಾಕಲಾದ ಗ್ರಾಸ್ ವ್ಯಾಟ್ ತೆರಿಗೆಯ ಮೊತ್ತದ 75% ಆದರೆ ಸ್ಥಿರ ಸ್ವತ್ತುಗಳ ಮೇಲಿನ ಬಂಡವಾಳದ ಶೇ. 75ರ ಮಿತಿಗೆ ಒಳಪಟ್ಟು ಈ ಸಾಲವನ್ನು 6 ವರ್ಷಗಳ ನಂತರ 3 ವಾರ್ಷಿಕ ಕಂತುಗಳಲ್ಲಿ ಮರು ಪಾವತಿ ಮಾಡಬೇಕು. |

**ಈ ಕೆಳಕಂಡಂತೆ ಓದಿಕೊಳ್ಳುವುದು:**

| ಹೂಡಿದ ಬಂಡವಾಳ (ಕೋಟಿ ರೂ.ಗಳಲ್ಲಿ) | ಕನಿಷ್ಠ ಉದ್ಯೋಗ ನೀಡಿಕೆ | ಬಡ್ಡಿ ರಹಿತ ಸಾಲದ ಮೊತ್ತ |
|---|---|---|
| 51–250 | ಕನಿಷ್ಠ 200 ಆನಂತರದ ಪ್ರತಿ 50 ಕೋಟಿ ರೂ.ಗಳ ಬಂಡವಾಳ ಹೂಡಿಕೆಗೆ 20 ರಂತೆ | ಪ್ರಾರಂಭಿಕ 6 ವರ್ಷಗಳಿಗೆ ಲೆಕ್ಕ ಹಾಕಲಾದ ಗ್ರಾಸ್ ವ್ಯಾಟ್ ತೆರಿಗೆಯ ಮೊತ್ತದ ಶೇ. 50% ಆದರೆ ಸ್ಥಿರ ಸ್ವತ್ತುಗಳ ಮೇಲಿನ ಬಂಡವಾಳದ ಗರಿಷ್ಠ ಶೇ. 75ರ ಮಿತಿಗೆ ಒಳಪಟ್ಟು; ಈ ಸಾಲವನ್ನು 6 ವರ್ಷಗಳ ನಂತರ 3 ವಾರ್ಷಿಕ ಕಂತುಗಳಲ್ಲಿ ಮರುಪಾವತಿ ಮಾಡಬೇಕು. |

**(2) ಮಾರ್ಚ್ 5, 2009ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ಹೊಸ ಕೈಗಾರಿಕಾ ನೀತಿ 2009–14ರ (ಕನ್ನಡ ಅನುವಾದ) ಅನುಬಂಧ–2 ಕಂಡಿಕೆ ಸಂಖ್ಯೆ 14 (iii) ರಲ್ಲಿನ**

**ಈ ಕೆಳಗಿನ ಮಾಹಿತಿಯನ್ನು**

"14 (iii) ಬಿ.ಐ.ಎಸ್. ಪ್ರಮಾಣ ಪತ್ರ : ಬಿಐಎಸ್‌ಗೆ ನೀಡಲಾದ ಶುಲ್ಕದ 50% (ಗರಿಷ್ಠ 25,000 ರೂಪಾಯಿಗಳು) ಮತ್ತು ಬಿ.ಐ.ಎಸ್. ನಿಂದ ಅನುಮೋದಿತವಾದ ಪರೀಕ್ಷಣಾ ಉಪಕರಣಗಳ ಖರೀದಿಗಾಗಿ ಮಾಡಿದ ವೆಚ್ಚದ 25% (ಗರಿಷ್ಠ 50,000 ರೂಪಾಯಿಗಳು)".

**ಈ ಕೆಳಕಂಡಂತೆ ಓದಿಕೊಳ್ಳುವುದು:**

"14 (iii) ಬಿ.ಐ.ಎಸ್. ಪ್ರಮಾಣ ಪತ್ರ : ಬಿಐಎಸ್‌ಗೆ ನೀಡಲಾದ ಶುಲ್ಕದ 50% (ಗರಿಷ್ಠ 20,000 ರೂಪಾಯಿಗಳು) ಮತ್ತು ಬಿ.ಐ.ಎಸ್ ನಿಂದ ಅನುಮೋದಿತವಾದ ಪರೀಕ್ಷಣಾ ಉಪಕರಣಗಳ ಖರೀದಿಗಾಗಿ ಮಾಡಿದ ವೆಚ್ಚದ 25% (ಗರಿಷ್ಠ 50,000 ರೂಪಾಯಿಗಳು)".

**(3) ಮಾರ್ಚ್ 5, 2009ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ಹೊಸ ಕೈಗಾರಿಕಾ ನೀತಿ 2009–14ರ (ಕನ್ನಡ ಅನುವಾದ) ಅನುಬಂಧ–2 ಕಂಡಿಕೆ ಸಂಖ್ಯೆ 14(V)ರಲ್ಲಿನ**

**ಈ ಕೆಳಗಿನ ಮಾಹಿತಿಯನ್ನು**

"14(V) ತಂತ್ರಜ್ಞಾನದ ಅಳವಡಿಕೆ : ಅಧಿಕೃತ ರಾಷ್ಟ್ರೀಯ ಪ್ರಯೋಗಾಲಯಗಳ ತಂತ್ರ ಜ್ಞಾನವನ್ನು ಅಳವಡಿಸುವ ವೆಚ್ಚದ 50% (ಗರಿಷ್ಠ 50000 ರೂಪಾಯಿಗಳು)".

**ಈ ಕೆಳಕಂಡಂತೆ ಓದಿಕೊಳ್ಳುವುದು :**

"14(V) ತಂತ್ರಜ್ಞಾನದ ಅಳವಡಿಕೆ : ಅಧಿಕೃತ ರಾಷ್ಟ್ರೀಯ ಪ್ರಯೋಗಾಲಯಗಳ ತಂತ್ರ ಜ್ಞಾನವನ್ನು ಅಳವಡಿಸುವ ವೆಚ್ಚದ 25% (ಗರಿಷ್ಠ 50000 ರೂಪಾಯಿಗಳು)".

**(4) ಮಾರ್ಚ್ 5, 2009ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ಹೊಸ ಕೈಗಾರಿಕಾ ನೀತಿ 2009–14ರ (ಕನ್ನಡ ಅನುವಾದ) ಅನುಬಂಧ–2 ಕಂಡಿಕೆ ಸಂಖ್ಯೆ 17 ರಲ್ಲಿನ**

**ಈ ಕೆಳಗಿನ ಮಾಹಿತಿಯನ್ನು**

**"17 ರಾಜ್ಯದ ಉದ್ಯೋಗ ಮೀಸಲಾತಿ ನೀತಿಯ ಅನುಷ್ಠಾನಕ್ಕಾಗಿ ಹೆಚ್ಚುವರಿ ಉತ್ತೇಜಕಗಳು:**

ಎಲ್ಲಾ ವಲಯಗಳಲ್ಲಿರುವ, 100ಕ್ಕಿಂತ ಹೆಚ್ಚು ಜನರಿಗೆ ಉದ್ಯೋಗ ನೀಡುತ್ತಿರುವ ಮದ್ಯಮ ಬೃಹತ್ ಮತ್ತು ಮೆಗಾ ಪ್ರಮಾಣದ ಉತ್ಪಾದನಾ ಘಟಕಗಳಿಗೆ:

ಮೀಸಲಾತಿಯ ವ್ಯಾಪ್ತಿಗೆ ಒಳಪಟ್ಟಿರುವ ಉದ್ಯೋಗಿಗಳಿಗೆ ಕಾರ್ಮಿಕರ ರಾಜ್ಯ ವಿಮಾ ಮತ್ತು ಉದ್ಯೋಗಿಗಳ ಭವಿಷ್ಯ ನಿಧಿ ಯೋಜನೆಗಳಿಗೆ ವಂತಿಗೆಯ ಬಾಬ್ತು ಮೊದಲ ಐದು ವರ್ಷಗಳಲ್ಲಿ ಸಲ್ಲಿಸಿದ ಮೊತ್ತವನ್ನು ಮರುಪಾವತಿ ಮಾಡಲಾಗುವುದು".

**ಈ ಕೆಳಕಂಡಂತೆ ಓದಿಕೊಳ್ಳುವುದು:**

**"17 ರಾಜ್ಯದ ಉದ್ಯೋಗ ಮೀಸಲಾತಿ ನೀತಿಯ ಅನುಷ್ಠಾನಕ್ಕಾಗಿ ಹೆಚ್ಚುವರಿ ಉತ್ತೇಜಕಗಳು:**

ಎಲ್ಲಾ ವಲಯಗಳಲ್ಲಿರುವ 100ಕ್ಕಿಂತ ಹೆಚ್ಚು ಜನರಿಗೆ ಉದ್ಯೋಗ ನೀಡುವ ಮದ್ಯಮ, ಬೃಹತ್ ಮತ್ತು ಮೆಗಾ ಪ್ರಮಾಣದ ಉತ್ಪಾದನಾ ಘಟಕಗಳಿಗೆ:

ಮೀಸಲಾತಿಯ ವ್ಯಾಪ್ತಿಗೆ ಒಳಪಟ್ಟಿರುವ ಉದ್ಯೋಗಿಗಳಿಗೆ ಕಾರ್ಮಿಕರ ರಾಜ್ಯ ವಿಮಾ ಮತ್ತು ಉದ್ಯೋಗಿಗಳ ಭವಿಷ್ಯ ನಿಧಿ ಯೋಜನೆಗಳಿಗೆ ವಂತಿಗೆಯ ಬಾಬ್ತು ಮೊದಲ ಐದು ವರ್ಷಗಳಲ್ಲಿ ಪಾವತಿಸಿದ 50% ರಷ್ಟು ಮೊತ್ತವನ್ನು ಮರುಪಾವತಿ ಮಾಡಲಾಗುವುದು".

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2150

**ಅಪರ್ಣ ಪಾವಟೆ**

ಪೀಠಾಧಿಕಾರಿ (ತಾಂತ್ರಿಕ ಕೋಶ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ
## ತಿದ್ದುಪಡಿ

**ಸಂಖ್ಯೆ : ಸಿಆಸುಇ 305 ಕೆಇವಿ 07, ಬೆಂಗಳೂರು ದಿನಾಂಕ : 6-7-10**

ದಿನಾಂಕ : 16-4-2008 ರ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 305 ಕೆಇವಿ 07 ರ ಆದೇಶ ಭಾಗದ ಎರಡನೇ ಕಂಡಿಕೆಯ ಎರಡನೇ ಸಾಲಿನಲ್ಲಿರುವ ನಿಯಮ 106-ಎ ಎಂಬುದರ ಬದಲಾಗಿ, ನಿಯಮ 8 (14-ಎ) ಎಂದು ತಿದ್ದುಪಡಿ ಮಾಡಿ, ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಎಂ. ವಾಸುದೇವಮೂರ್ತಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸು ಇಲಾಖೆ (ಸೇವೆಗಳು-2)

ಪಿ. ಆರ್. 2156

## ಇಂಧನ ಸಚಿವಾಲಯ

**ವಿಷಯ :** ಇಂಧನ ಇಲಾಖೆಗೆ ಲೇಖನ ಸಾಮಗ್ರಿಗಳನ್ನು ಖರೀದಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶದ ಸಂಖ್ಯೆ : ಸಿಆಸುಇ 6 ಡಿಎಸ್‌ವೈ 2009, ದಿನಾಂಕ 18-5-2009.
2) ಸರ್ಕಾರದ ಪತ್ರ ಸಂಖ್ಯೆ : ಇಎನ್ 150 ಸಮನ್ವಯ 2009, ದಿನಾಂಕ 15-4-2010.
3) ಸರ್ಕಾರದ ಪತ್ರ ಸಂಖ್ಯೆ : ಇಎನ್ 150 ಸಮನ್ವಯ 2009, ದಿನಾಂಕ : 3-7-2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ 1 ರಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಆದೇಶದಲ್ಲಿ ಸಚಿವಾಲಯದಲ್ಲಿ ವಿವಿಧ ಇಲಾಖೆಗಳಿಗೆ ಬೇಕಾಗುವ ಲೇಖನ ಸಾಮಗ್ರಿಗಳನ್ನು ಮತ್ತು ಇನ್ನಿತರ ಬಳಕೆ ಪದಾರ್ಥಗಳನ್ನು ಖರೀದಿಸುವ ಅಧಿಕಾರವನ್ನು ಆಯಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿಗಳಿಗೆ ವಹಿಸಲಾಗಿದೆ ಮತ್ತು ಈ ಆದೇಶದಲ್ಲಿ ಇಂಧನ ಇಲಾಖೆಗೆ ಲೇಖನ ಸಾಮಗ್ರಿಗಳನ್ನು ಖರೀದಿಸಲು ಲೆಕ್ಕ ಶೀರ್ಷಿಕೆ 2052-00-090-0-01-051 (ಸಾಮಾನ್ಯ ವೆಚ್ಚ) ರಲ್ಲಿ ರೂ. 12,000/- (ಹನ್ನೆರಡು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಒದಗಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ : 2 ರ ಪತ್ರದಲ್ಲಿ ಇಂಧನ ಇಲಾಖೆಗೆ ಅಗತ್ಯವಿರುವ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡಲು ದರಪಟ್ಟಿಗಳನ್ನು ಸಲ್ಲಿಸುವಂತೆ ಸಂಸ್ಥೆಗಳಿಗೆ ಕೋರಲಾಗಿತ್ತು. ಅದರಂತೆ ಮೆ॥ ಶ್ರೀ ಎಸ್.ಎಲ್.ವಿ. ಡ್ರಾಯಿಂಗ್ ಸ್ಟೋರ್ಸ್, 617/2 ರಾಜೇಶ್ವರಿ ಮಾರ್ಕೆಟ್, ಅವೆನ್ಯೂ ರೋಡ್, ಬೆಂಗಳೂರು, ಮೆ॥ ಶ್ರೀ ವೆಂಕಟೇಶ್ವರ ಎಂಟರ್‌ಪ್ರೈಸಸ್, 13, 20ನೇ ಕ್ರಾಸ್, ಕಬ್ಬನ್ ಪೇಟೆ, ಬೆಂಗಳೂರು ಮತ್ತು ಮೆ॥ ಡಿಸ್ಟ್ರಿಕ್ಟ್ ಸಪ್ಲೈ ಅಂಡ್ ಮಾರ್ಕೆಟಿಂಗ್ ಕೋ-ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ದರಪಟ್ಟಿಯನ್ನು ಸಲ್ಲಿಸಿರುತ್ತಾರೆ. ಈ ಮೂರು ಸಂಸ್ಥೆಗಳ ದರಪಟ್ಟಿಯನ್ನು ಪರಿಶೀಲಿಸಿದಾಗ ಮೆ॥ ಶ್ರೀ ಎಸ್.ಎಲ್.ವಿ. ಡ್ರಾಯಿಂಗ್ ಸ್ಟೋರ್ಸ್ ಇವರು ಸಲ್ಲಿಸಿರುವ ಬೆಲೆಗಳ ದರಪಟ್ಟಿ ಕಡಿಮೆ ಇರುತ್ತದೆ. ಆದುದರಿಂದ, ಮೆ॥ ಶ್ರೀ ಎಸ್.ಎಲ್.ವಿ. ಡ್ರಾಯಿಂಗ್ ಸ್ಟೋರ್ಸ್ ಇವರಿಂದ ಲೇಖನ ಸಾಮಗ್ರಿಗಳನ್ನು ಪಡೆಯಲು ತೀರ್ಮಾನಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ 3 ರ ಪತ್ರದಲ್ಲಿ ಇಂಧನ ಇಲಾಖೆಗೆ ಅಗತ್ಯವಿರುವ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡುವಂತೆ ಮೆ॥ ಶ್ರೀ ಎಸ್.ಎಲ್.ವಿ. ಡ್ರಾಯಿಂಗ್ ಸ್ಟೋರ್ಸ್ ಇವರನ್ನು ಕೋರಲಾಗಿತ್ತು. ಅದರಂತೆ, ಮೆ॥ ಶ್ರೀ ಎಸ್.ಎಲ್.ವಿ. ಡ್ರಾಯಿಂಗ್ ಸ್ಟೋರ್ಸ್ ಇವರು ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡಿ ಇದಕ್ಕೆ ಸಂಬಂಧಿಸಿದ ವೆಚ್ಚ ಬಾಬ್ತು ರೂ. 11,998/- (ಹನ್ನೊಂದು ಸಾವಿರದ ಒಂಭೈನೂರ ತೊಂಬತ್ತೆಂಟು ರೂಪಾಯಿಗಳು ಮಾತ್ರ) (ಮೌಲ್ಯವರ್ಧಿತ ತೆರಿಗೆ ಸೇರಿ) ಗಳನ್ನು ಸಂದಾಯ ಮಾಡುವಂತೆ ಬಿಲ್ಲನ್ನು ದಿನಾಂಕ : 23-7-2010 ರಂದು ಸಲ್ಲಿಸಿರುತ್ತಾರೆ. ಆದುದರಿಂದ, ಮೆ॥ ಶ್ರೀ ಎಸ್.ಎಲ್.ವಿ. ಡ್ರಾಯಿಂಗ್ ಸ್ಟೋರ್ಸ್ ಇವರಿಗೆ ಬಿಲ್ಲಿನ ಹಣವನ್ನು ಸಂದಾಯ ಮಾಡಲು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 150 ಸಮನ್ವಯ 2008, ಬೆಂಗಳೂರು, ದಿನಾಂಕ : 12-8-2010**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಹಿನ್ನೆಲೆಯಲ್ಲಿ ಇಂಧನ ಇಲಾಖೆಗೆ ಅಗತ್ಯವಿರುವ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡುವ ಸಂಬಂಧ ಬಿಲ್ಲಿನ ಮೊತ್ತ ವೆಚ್ಚ ರೂ. 11,998/- (ಹನ್ನೊಂದು ಸಾವಿರದ ಒಂಭೈನೂರ ತೊಂಬತ್ತೆಂಟು ರೂಪಾಯಿಗಳು ಮಾತ್ರ) (ಮೌಲ್ಯವರ್ಧಿತ ತೆರಿಗೆ ಸೇರಿ) ಗಳನ್ನು ಮೆ॥ ಶ್ರೀ ಎಸ್.ಎಲ್.ವಿ. ಡ್ರಾಯಿಂಗ್ ಸ್ಟೋರ್ಸ್, 617/2 ರಾಜೇಶ್ವರಿ ಮಾರ್ಕೆಟ್, ಅವೆನ್ಯೂ ರೋಡ್, ಬೆಂಗಳೂರು ಇವರಿಗೆ ಸಂದಾಯ ಮಾಡಲು ಮಂಜೂರಾತಿ ನೀಡಿದೆ.

ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2052-00-090-0-01-051 (ಸಾಮಾನ್ಯ ವೆಚ್ಚ) (ಯೋಜನೇತರ)" ರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10-7-1996 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಎಸ್.ಜಿ. ಸಂಪತ್ ಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿ. ಆರ್. 2157

## ಕಾರ್ಮಿಕ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ಕಾಇ 270 ಎಲ್‌ಎಸ್‌ಐ 2010, ಬೆಂಗಳೂರು ದಿನಾಂಕ : 30–7–10**

ಕಾರ್ಮಿಕ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯ ವೈದ್ಯಾಧಿಕಾರಿಗಳಿಗೆ ಕಾಲಬದ್ಧ ಪದೋನ್ನತಿ ನೀಡಿ ಹೊರಡಿಸಲಾದ ಅಧಿಸೂಚನೆ ಸಂಖ್ಯೆ : ಕಾಇ 8 ಎಲ್‌ಎಸ್‌ಐ 2008 ದಿನಾಂಕ : 5–12–2008ರ ಕ್ರ.ಸಂ. 21 ರಲ್ಲಿರುವ ಡಾ॥ ಬಿ.ಸಿ.ವಾಸಂತಿ, ಕಿರಿಯ ತಜ್ಞರು, ಕಾರಾವಿ ಚಿಕಿತ್ಸಾಲಯ, ಮಂಡ್ಯ ಇವರ ಜನ್ಮ ದಿನಾಂಕ : 20–12–1962 ಮತ್ತು ವಿದ್ಯಾರ್ಹತೆ M.B.B.S. D.C.H., ಎಂದು ಇರುವುದನ್ನು ಜನ್ಮ ದಿನಾಂಕ 20–12–1961 ಹಾಗೂ ವಿದ್ಯಾರ್ಹತೆ M.B.B.S. D.O.M.S., ಎಂದು ತಿದ್ದುಪಡಿ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಗೋವಿಂದಸ್ವಾಮಿ)**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ (ಕಾರಾವಿ ಯೋ (ವೈ) ಸೇವೆಗಳು)

ಪಿ. ಆರ್. 2158

## ENERGY SECRETARIAT

**Sub :** Establishment of Gas Based Power Projects in the State of Karnataka-Constitution of Committee to Study the modalities of pricing of gas and to tie up with GAIL regarding LNG Contract.

**Read :** i) Letter No. A1 R1 A (PS) dated 16-7-2010 received from the Managing Director, Karnataka Power Corporation Limited.

ii) Proceedings of Load Management meeting held on 9-7-2010 under the chairmanship of Chief Secretary, Govt. of Karnataka.

**PREAMBLE :**

1. Government of Karnataka has entered into Memorandum of Understanding (MoU) with M/s. Gas Authority of India Ltd. (GAIL) on 29-4-2009 for natural gas infrastructure and city gas distribution. Under this agreement GAIL will lay two gas pipe line in the State.

a) Dabhol to Bangalore-(Trunk line-746 Kms, Spur line 650 kms)

b) Kochi-Kanjirrkod-Bangalore pipeline and Kochi – Kanjirrkod Mangalore pipeline- (Trunk line 862 kms, Spur line -252 kms)

With the objective of maximizing the gains from the gas pipe line running across the State, Govenrment is endeavouring to develop gas based power plants all along the trunk and spur lines proposed which pass through the Districts of Belgaum, Gadag, Davanagere, Chitradurga, Tumkur and reach Bidadi.

2. The pipeline configuration of Dabhol-Bangalore trunk line of 746 kms with a diameter of 30" and a branch line (spur) of 650 kms with a diameter of 18"/10"/8". The designed capacity is for 16 Million Metric Standard Cubic Meters per Day (MMSCMD) capacity. The Dabhol to Bangalore pipeline is likely to get the commissioned by 2012 and the Kochi-Kanjirrkod-Bangalore pipeline and Kochi-Kanjirrkod- Mangalore pipeline by 2013.

3. Managing Director, Karnataka Power Corporation Limited, in the letter read at (1) above has stated as follows :

a) Karnataka Power Corporation Limited has made all arrangements for starting the work on the construction of 1400 MW Gas-based Combined Cycle Power Project at Bidadi using the water treated for this purpose at the Bangalore Water Supply & Sewerage Board Sewerage Treatment Plant near Kengeri. The last date for receiving final tender papers is 10-8-2010 for EPC contract for construction of the power plant.

b) The power plant construction will be completed in all respects by December 2012 i.e., within a period of 30 months if not earlier. The GAIL gas pipeline is expected to be completed around the same time. Combining with these two facilities, KPCL has to complete immediately the arrangements for medium/long term gas supply for the plant through the said pipeline from one of the GAIL owned terminals at Dhabol/Cochin/Dahej. For this purpose, GAIL has been pursuing with KPCL to buy gas from them. They are also persuading KPCL to finalize the gas purchase agreement with them for long or medium term at certain price lines they are indicating. Similarly, IOCL and BPCL have also expressed keen interest in supplying gas from the same terminals independently from their own source at rates which they say would be reasonable and cheaper.

c) Karnataka Power Corporation Limited has to finalize gas supply agreement with one of these three agencies, all of which are owned by the Ministry of Petroleum & Natural Gas, Government of India. It is also affirmed by all the three of them that purchase of LNG from abroad by any of them would be governed by the price equalization order of the Government of India. However, all these points need to be finally tackled and agreement concluded at the earliest.

Karnataka Power Corporation Limited has also appointed a consultant in this regard to advise it on certain technical matters including purchase of LNG. Negotiation with these Companies for firming up of gas price (based on LNG supply agreements with foreign suppliers by GAIL/IOCL/BPCL) in the volatile LNG market in Asia is a Complicated and risky task.

Government vide order No. EN 48 PPC 2009 dated 14-5-2010 has nominated KPCL as the anchor with GAIL to ensure long term gas supply for Bidadi Gas based Power Project.

4. In the Load Management Meeting held under the chairmanship of the Chief Secretary on 9-7-2010, a decision was taken to constitute an official committee consisting of the following officers to work out modalities of pricing of gas and to tie up with GAIL regarding LNG contract :

i) Principal Secretary to Govt., Energy Department, Government of Karnataka.
ii) Principal Secretary to Govt., Finance Department, Government of Karnataka.
iii) Secretary to Chief Minister, Government of Karnataka.
iv) Managing Director, Karnataka Power Corporation Limited.
v) Managing Director, Karnataka Power Transmission Corporation Limited (KPTCL)

5. The matter has been examined and hence the following Order :

**GOVERNMENT ORDER NO. EN 48 PPC 2009, BANGALORE DATED: 4th August 2010.**

Under the circumstances explained in the preamble, Government accords approval for the following;

(a) to constitute a Committee with the following Officers to work out the modalities of pricing of gas for the power projects to be supplied by GAIL/IOC/BPCL & other matters regarding LNG Contract ;

| | | | |
|---|---|---|---|
| i) | Principal Secretary to Govt., Energy Department, Government of Karnataka | - | Chairman |
| ii) | Principal Secretary to govt. Finance Department, Government of Karnataka | - | Member |
| iii) | Secretary to Chief Minister, Government of Karnataka | - | Member |
| iv) | Managing Director, Karnataka Power Transmission Corporation Limited (KPTCL) | - | Member |
| v) | Managing Director, Karnataka Power Corporation Limited (KPCL) | - | Member-Secretary |

b) The Committee shall submit its Report to the Government within a period of one month.

By Order and in the name of the Governor of Karnataka,

**(S.J. Sampath Kumar)**
Under Secretary to Government,
Energy Department.

P.R.2159

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ತಿದ್ದೋಲೆ

**ಸಂಖ್ಯೆ : ಸಿಆಸುಇ 159 ಸಿಶಾಸೇ 2010, ಬೆಂಗಳೂರು ದಿನಾಂಕ : 9–8–10**

ಕರ್ನಾಟಕ ಸರ್ಕಾರ ಸಚಿವಾಲಯದ (ನೇಮಕಾತಿ) ನಿಯಮಗಳು, 1992 ರನ್ವಯ, ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಸೂಚಿಸಿದ 5 ಅಂಗವಿಕಲ ಅಭ್ಯರ್ಥಿಗಳನ್ನು ಕರ್ನಾಟಕ ಸರ್ಕಾರ ಸಚಿವಾಲಯದ ಶಾಖಾಧಿಕಾರಿ ಹುದ್ದೆಗೆ ನೇಮಕಾತಿ ಮಾಡಿ ಹೊರಡಿಸಿದ ಅಧಿಸೂಚನೆ ಸಂಖ್ಯೆ : ಸಿಆಸುಇ 252 ಸಿಶಾಸೇ 2008, ದಿನಾಂಕ : 19–3–2009 ರಲ್ಲಿನ ಕಂಡಿಕೆ–3ರ ಕ್ರಮ ಸಂಖ್ಯೆ : 5 ರಲ್ಲಿರುವ ಅಭ್ಯರ್ಥಿಯ ಹೆಸರನ್ನು "ಶ್ರೀ ಶಂಕರೇಗೌಡ ದೊಡ್ಡಮನಿ" ಎಂಬುದರ ಬದಲಾಗಿ " ಶ್ರೀ ಶಂಕರಗೌಡ ದೊಡ್ಡಮನಿ" ಎಂಬುದಾಗಿ ತಿದ್ದಿಕೊಂಡು ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಎಸ್.ಎನ್. ಕೃಷ್ಣಮೂರ್ತಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸಿಬ್ಬಂದಿ)

ಪಿ. ಆರ್. 2160

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** 2010–11ನೇ ಸಾಲಿಗೆ ಕೆಳದಿ ವಸ್ತು ಸಂಗ್ರಹಾಲಯ ಮತ್ತು ಸಂಶೋಧನಾ ಕೇಂದ್ರ ಇವರಿಗೆ ನಿಗದಿ ಪಡಿಸಿರುವ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ ; ಡಿಎಎಂ/ಎಸಿಟಿ/1/21/2010–11, ದಿನಾಂಕ : 28–6–2010.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 28–6–2010ರ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರು ಪ್ರಸ್ತಾವನೆ ಸಲ್ಲಿಸಿ ಕುವೆಂಪು ವಿಶ್ವವಿದ್ಯಾನಿಲಯ ಇವರ ದಿನಾಂಕ : 9–6–2010ರ ಪತ್ರವನ್ನು ಉಲ್ಲೇಖಿಸಿ ಕೆಳದಿ ವಸ್ತು ಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನ ಕೇಂದ್ರ, ಕೆಳದಿ, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಇವರಿಗೆ ಸಿಬ್ಬಂದಿಯ ವೇತನ ಮತ್ತು ಭತ್ಯೆಗಳಿಗಾಗಿ 2010–11ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೇತರ) 101 ಸಹಾಯಾನುದಾನ ಇದರಡಿಯಲ್ಲಿ ಕೆಳದಿ ವಸ್ತು ಸಂಗ್ರಹಾಲಯಕ್ಕೆ ನಿಗದಿ ಪಡಿಸಲಾಗಿರುವ ಅನುದಾನ ರೂ. 7.63 ಲಕ್ಷವನ್ನು ಕುಲಸಚಿವರು, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, ಶಿವಮೊಗ್ಗ ಇವರಿಗೆ ಪೇಯಿಸ್ ರಸೀತಿ ಮೂಲಕ ಬಿಡುಗಡೆ ಮಾಡಲು ಮಂಜೂರಾತಿ ಆದೇಶ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ : ಕಸಂವಾಪ್ರ 139 ಕೆಎಂಯು 2010, ಬೆಂಗಳೂರು, ದಿನಾಂಕ : 5–8–2010**

ಕೆಳದಿ ವಸ್ತು ಸಂಗ್ರಹಾಲಯ ಮತ್ತು ಸಂಶೋಧನಾ ಕೇಂದ್ರದ ಸಿಬ್ಬಂದಿಯ ವೇತನ ಮತ್ತು ಭತ್ಯೆಗಳಿಗಾಗಿ 2010–11ನೇ ಸಾಲಿನಲ್ಲಿ ನಿಗದಿ ಪಡಿಸಲಾಗಿರುವ ಅನುದಾನ ರೂ. 7.63 ಲಕ್ಷಗಳಲ್ಲಿ ಮೊದಲನೇ ಕಂತಾಗಿ ರೂ. 3.81 ಲಕ್ಷ (ರೂ. ಮೂರು ಲಕ್ಷ ಎಂಭತ್ತೊಂದು ಸಾವಿರ ಮಾತ್ರ) ಗಳನ್ನು ಕುಲಸಚಿವರು, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, ಶಿವಮೊಗ್ಗ ಇವರಿಗೆ ಪೇಯಿಸ್ ರಸೀತಿ ಮೂಲಕ ಬಿಡುಗಡೆ ಮಾಡಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರಿಗೆ ಈ ಮೂಲಕ ಸರ್ಕಾರ ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೇತರ) 101 ಸಹಾಯಾನುದಾನ ಇದರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ಹಾಗೂ ವಾರ್ತಾ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರು ಟಿಪ್ಪಣಿ ಸಂಖ್ಯೆ : ಶಿಇ 1349 ಐಎಫ್ (ಬಿ&ಎ) 2010, ದಿನಾಂಕ : 19–7–2010 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

(ಎಂ. ಕೆ. ಧರ್ಮರಾಜಪ್ಪ)
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

ಪಿ. ಆರ್. 2161

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** 2010–11ನೇ ಸಾಲಿನಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಇಲಾಖೆಯ ಅಧಿಕಾರಿಗಳ ಉಪಯೋಗಕ್ಕಾಗಿ ಬಾಹ್ಯ ಮೂಲದಿಂದ ವಾಹನ ಸೌಲಭ್ಯ ಪಡೆಯುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರ ಪತ್ರ ಸಂಖ್ಯೆ ; ಡಿಎಎಂ/ಎಸಿಟಿ/1/6/2009–10, ದಿನಾಂಕ : 12–5–2010.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 12–5–2010ರ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಇವರು 2009–10ನೇ ಸಾಲಿನಲ್ಲಿ ಮುಂದುವರಿದ ಹೊಸ ಘಟಕಗಳ ಅಡಿಯಲ್ಲಿ ಇಲಾಖೆಯ ಕಾಮಗಾರಿಗಳ ಮೇಲ್ವಿಚಾರಣೆ ಮತ್ತು ಇತರೆ ಉದ್ದೇಶಗಳಿಗೆ ದಿನಾಂಕ 20–3–2010ರ ಸರ್ಕಾರಿ ಆದೇಶ ಸಂಖ್ಯೆ ಕಸಂವಾಪ್ರ 215 ಕೆಎಂಯು 2009 ರಲ್ಲಿ ಮೂರು ವಾಹನಗಳನ್ನು ಬಾಡಿಗೆ ಆಧಾರದ ಮೇಲೆ ಪಡೆಯಲು ಮಂಜೂರಾತಿ ನೀಡಲಾಗಿದೆ. 2010–11ನೇ ಸಾಲಿನಲ್ಲಿ ಈ ಇಲಾಖೆಯ ಯೋಜನಾ ಕಾರ್ಯಕ್ರಮಕ್ಕೆ ರೂ. 1733.01 ಹಾಗೂ ಯೋಜನೇತರ ಬಾಬ್ತಿನಲ್ಲಿ ರೂ 137.89 ಲಕ್ಷಗಳನ್ನು ನಿಗದಿಪಡಿಸಿದ್ದು, ಇದಕ್ಕನುಗುಣವಾಗಿ ಇಲಾಖೆಯಿಂದ ಅನೇಕ ಕಾಮಗಾರಿಗಳನ್ನು ಹಮ್ಮಿಕೊಳ್ಳಲಾಗುತ್ತಿದ್ದು, ಇವುಗಳನ್ನು ನಿಗದಿತ ಅವಧಿಯೊಳಗೆ ಪೂರ್ಣಗೊಳಿಸಬೇಕಾಗಿರುತ್ತದೆ. ಈ ಕಾಮಗಾರಿಗಳ ಪ್ರಗತಿ ವೀಕ್ಷಿಸಲು ಇಲಾಖೆಯ ಉಪನಿರ್ದೇಶಕರು ಹಾಗೂ ಪುರಾತತ್ವ ಸಂರಕ್ಷಣಾ ಇಂಜಿನಿಯರ್‌ಗಳು ಆಗಿಂದಾಗ್ಗೆ ಪ್ರಯಾಣ ಕೈಗೊಳ್ಳಬೇಕಾಗಿರುವುದರಿಂದ ವಾಹನದ ಅವಶ್ಯಕತೆಯಿದೆ. ಈ ನಿಟ್ಟಿನಲ್ಲಿ ಕಳೆದ ವರ್ಷ ಮಂಜೂರಾಗಿರುವ ಮೂರು ವಾಹನಗಳನ್ನು ಬಾಡಿಗೆ ಆಧಾರದ ಮೇಲೆ ಜೂನ್ 2010 ರಿಂದ ಮಾರ್ಚ್ 2011 ರವರೆಗೆ ಅಂದರೆ 10 ತಿಂಗಳುಗಳಿಗೆ ಮುಂದುವರೆಸಬೇಕಾಗಿರುತ್ತದೆ. ಒಂದು ವಾಹನಕ್ಕೆ ತಿಂಗಳಿಗೆ ರೂ. 20,000 (ರೂ. ಇಪತ್ತು ಸಾವಿರ ಮಾತ್ರ) ದಂತೆ 10 ತಿಂಗಳಿಗೆ ರೂ. 2.00 ಲಕ್ಷ ತಗುಲಲಿದ್ದು, ಒಟ್ಟು ಮೂರು ವಾಹನಕ್ಕೆ ರೂ. 6.00 ಲಕ್ಷ ವೆಚ್ಚವಾಗಲಿದೆ. ಈ ವೆಚ್ಚವನ್ನು ಪ್ರಸಕ್ತ ಸಾಲಿನ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) 059 ಇತರೆ ಖರ್ಚು ಅಡಿಯಲ್ಲಿ ಭರಿಸಲಾಗುವುದೆಂದು ತಿಳಿಸಿ, ಈ ಬಗ್ಗೆ ಸರ್ಕಾರದ ಮಂಜೂರಾತಿ ಆದೇಶ ನೀಡುವಂತೆ ಕೋರಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಕಸಂವಾಪ್ರ 107 ಕೆಎಂಯು 2010, ಬೆಂಗಳೂರು, ದಿನಾಂಕ : 6-8-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2010-11 ನೇ ಸಾಲಿನಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಇಲಾಖೆಯ ಅಧಿಕಾರಿಗಳ ಉಪಯೋಗಕ್ಕಾಗಿ ಬಾಹ್ಯ ಮೂಲದಿಂದ 3 ವಾಹನಗಳನ್ನು ಜೂನ್ 2010 ರಿಂದ ಮಾರ್ಚ್ 2011 ರವರೆಗೆ (10 ತಿಂಗಳು) ಬಾಡಿಗೆ ಆಧಾರದ ಮೇಲೆ ಪಡೆಯಲು ರೂ. 6.00 ಲಕ್ಷ (ರೂ. ಆರು ಲಕ್ಷಗಳು ಮಾತ್ರ) ಗಳನ್ನು ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರಿಗೆ ಬಿಡುಗಡೆ ಮಾಡಿದೆ.

ಈ ವೆಚ್ಚವನ್ನು 2010-11ನೇ ಸಾಲಿನ ಲೆಕ್ಕಶೀರ್ಷಿಕೆ 2205-00-103-0-01 (ಯೋಜನೆ)-059 ಇದರಡಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ, ಹಾಗೂ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಅವರು ಅನಧಿಕೃತ ಟಿಪ್ಪಣಿ ಸಂಖ್ಯೆ : ಶಿಇ 1426 ಐಎಫ್ (ಬಿ&ಎ) 2010, ದಿನಾಂಕ : 24-7-2010 ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**(ಎಂ. ಕೆ. ಧರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

ಪಿ. ಆರ್. 2162

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮದ ಅಡಿಯಲ್ಲಿ 2007-08ನೇ ಸಾಲಿನ ಹೊಸ ಘಟಕಗಳಡಿಯಲ್ಲಿ ಮಂಜೂರಾದ ಪುರಾತತ್ವ ಸಂರಕ್ಷಣಾ ಸಹಾಯಕರ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. **ಸರ್ಕಾರದ ಆದೇಶ ಸಂ : ಕಸಂವಾಪ್ರ 70 ಸ್ಕೀಮರ 2007, ದಿನಾಂಕ : 18-8-2007**
2. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಇವರ ದಿನಾಂಕ : 23-6-2010 ರಂದು ಕೊನೆಗೊಂಡ ಪತ್ರ ಸಂಖ್ಯೆ ; ಡಿಎಎಂ:ಇಎಸ್‌ಟಿ. 1 : ಕಸಂ. 255(3) : 2010-11/15.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ : 18-8-2007 ರ ಸರ್ಕಾರಿ ಆದೇಶದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಗೆ ಸಂಬಂಧಿಸಿದಂತೆ ಇಲಾಖೆಯಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮದ ಅಡಿಯಲ್ಲಿ 2007-08ನೇ ಸಾಲಿನ ಹೊಸ ಘಟಕಗಳಡಿಯಲ್ಲಿ ಮಂಜೂರಾದ 4 ಪುರಾತತ್ವ ಸಂರಕ್ಷಣಾ ಸಹಾಯಕರ ಹುದ್ದೆಗಳನ್ನು 12ನೇ ಹಣಕಾಸು ಆಯೋಗದ ಅವಧಿಯವರೆಗೆ ಸೃಜಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಇವರು ಪ್ರಸ್ತಾವನೆ ಸಲ್ಲಿಸಿ 12ನೇ ಹಣಕಾಸು ಆಯೋಗದ ಅವಧಿಯು ದಿನಾಂಕ : 31-3-2010ಕ್ಕೆ ಮುಕ್ತಾಯಗೊಂಡಿದ್ದು, ಇದರ ಅಡಿಯಲ್ಲಿ ಇಲಾಖೆಯು ಹಮ್ಮಿಕೊಂಡಿರುವ ಸ್ಮಾರಕಗಳ, ಸಂರಕ್ಷಣಾ ಕಾರ್ಯಕ್ರಮಗಳು ಇನ್ನು ಪೂರ್ಣವಾಗದೆ ಬಾಕಿಯಿರುವುದರಿಂದ ಮತ್ತು 2010-11ನೇ ಸಾಲಿಗೆ ರಾಜ್ಯ ಸರ್ಕಾರದ ಅನುದಾನವು ಕೂಡ ಹೆಚ್ಚಾಗಿದ್ದು, ಎಲ್ಲಾ ಕಾರ್ಯಕ್ರಮಗಳನ್ನು ಸಮರ್ಪಕವಾಗಿ ಪೂರೈಸಬೇಕಾದಲ್ಲಿ ಉಸ್ತುವಾರಿಗಾಗಿ ಸದರಿ ನಾಲ್ಕು (4) ಪುರಾತತ್ವ ಸಂರಕ್ಷಣಾ ಸಹಾಯಕರುಗಳ ಸೇವೆಯು ಅವಶ್ಯಕವಾಗಿರುತ್ತದೆಯೆಂದು ತಿಳಿಸಿ ಸದರಿ ಹುದ್ದೆಗಳನ್ನು ಮುಂದುವರಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಕಸಂವಾಪ್ರ 99 ಕೆಎಂಯು 2010, ಬೆಂಗಳೂರು, ದಿನಾಂಕ : 6-8-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇಲ್ಲಿನ ನಾಲ್ಕು (4) ಪುರಾತತ್ವ ಸಂರಕ್ಷಣಾ ಸಹಾಯಕರುಗಳ ಹುದ್ದೆಗಳನ್ನು ದಿನಾಂಕ : 1-4-2010 ರಿಂದ 31-3-2011ರ ವರೆಗೆ ಒಂದು ವರ್ಷದ ಅವಧಿಗೆ ಮುಂದುವರೆಸಿ ಆದೇಶಿಸಿದೆ.

ಇದಕ್ಕೆ ತಗಲುವ ವೆಚ್ಚವನ್ನು 2010-11ನೇ ಸಾಲಿನ ಲೆಕ್ಕಶೀರ್ಷಿಕೆ 2205-00-103-0-01 (ಯೋಜನೆ)-059 ಇತರೆ ಖರ್ಚು ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10-7-1996ರಲ್ಲಿ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**(ಎಂ. ಕೆ. ಧರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

ಪಿ. ಆರ್. 2163

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಶ್ರೀ ಪ್ರಕಾಶ್ ವಿ. ಮತ್ತಿಹಳ್ಳಿ, ಸಾಂಖ್ಯಿಕ ನಿರೀಕ್ಷಕರು, ಇವರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನಾ ಆದೇಶದ ವಿರುದ್ಧ ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿಯ ಕುರಿತು.

**ಓದಲಾಗಿದೆ :** 1) ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶಕರ ದಂಡನಾ ಆದೇಶ ಸಂಖ್ಯೆ: ಆಸಾಂನಿ/174/ಆಡಳಿತ–2/2007–08 ದಿನಾಂಕ: 14–12–2009.

2) ಶ್ರೀ ಪ್ರಕಾಶ್ ವಿ. ಮತ್ತಿಹಳ್ಳಿ, ಸಾಂಖ್ಯಿಕ ನಿರೀಕ್ಷಕರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ: 02–02–2010 ರ ಮೇಲ್ಮನವಿ.

**ಪ್ರಸ್ತಾವನೆ :**

ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಸಮೂಹ 'ಸಿ' ವೃಂದದ ನೌಕರರಾದ ಶ್ರೀ ಪ್ರಕಾಶ್ ವಿ. ಮತ್ತಿಹಳ್ಳಿ, ಸಾಂಖ್ಯಿಕ ನಿರೀಕ್ಷಕರು ಇವರಿಗೆ, ಶಿಸ್ತು ಪ್ರಾಧಿಕಾರವಾದ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶಕರು ಸದರಿ ನೌಕರರ ವಿರುದ್ಧದ ಜಂಟಿ ಇಲಾಖಾ ವಿಚಾರಣೆಯಲ್ಲಿ ವಿಚಾರಣಾಧಿಕಾರಿಗಳು ಮಾಡಿರುವ ಶಿಫಾರಸ್ಸುಗಳನ್ನು ಪರಿಶೀಲಿಸಿ, ಈ ನೌಕರರ ಮೇಲೆ ಹೊರಿಸಲಾದ ಆರೋಪಗಳು ಸದರಿ ಜಂಟಿ ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿದ್ದುದರಿಂದ, ಅವರ ವಿರುದ್ಧದ ಆರೋಪಗಳು ಗಂಭೀರ ಸ್ವರೂಪದ ಆರೋಪಗಳಾಗಿದ್ದು, ಈ ನೌಕರರಿಗೆ ಕಠಿಣ ದಂಡನೆಯನ್ನು ವಿಧಿಸಬಹುದಾಗಿದ್ದರೂ, ಆಪಾದಿತ ನೌಕರರ ನಡವಳಿಕೆಯಲ್ಲಿ ಸುಧಾರಿಸುವಂತೆ ಎಚ್ಚರಿಕೆ ನೀಡಿ ಹಾಗೂ ಸುಧಾರಿಸಿಕೊಳ್ಳಲು ಅವಕಾಶ ಒದಗಿಸಿ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಇವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಸಹಿತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಿರುತ್ತಾರೆ. ಸದರಿ ದಂಡನಾ ಆದೇಶದ ವಿರುದ್ಧ ಈ ನೌಕರರು ಕರ್ನಾಟಕ ನಾಗರಿಕ ಸೇವಾ (ಸಿ.ಸಿ.ಎ) ನಿಯಮಗಳು 1957 ರ ನಿಯಮ 18ರ ಮೇರೆಗೆ ಸರ್ಕಾರಕ್ಕೆ ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಈ ನೌಕರರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿಯನ್ನು ಸದರಿ ನಿಯಮಗಳ ನಿಯಮ 25 (2) ರನ್ವಯ ಸಂಬಂಧಿತ ಇತರೆ ಎಲ್ಲಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ.

ಈ ಪ್ರಕರಣದ ಸಾರಾಂಶವು ಈ ರೀತಿ ಇರುತ್ತದೆ. ಶ್ರೀ ಪ್ರಕಾಶ್ ವಿ. ಮತ್ತಿಹಳ್ಳಿ, ಸಂಖ್ಯಿಕ ನಿರೀಕ್ಷಕರು ಇವರು ಹಾವೇರಿಯ ಲೋಕೋಪಯೋಗಿ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಹಾವೇರಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿಯಲ್ಲಿ ಸಹಾಯಕ ಸಾಂಖ್ಯಿಕ ಅಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಶ್ರೀ ಎಸ್.ಹೆಚ್. ವೆಂಕಣ್ಣವರ ಮತ್ತು ಅದೇ ಕಛೇರಿಯ ಮತ್ತೊಬ್ಬ ಸಾಂಖ್ಯಿಕ ನಿರೀಕ್ಷಕರಾದ ಶ್ರೀ ಆರ್.ಎಂ.ಕುಲಕರ್ಣಿ ಇವರನ್ನು ಜೊತೆಗೂಡಿಸಿಕೊಂಡು ಅಂದಿನ ಹಾವೇರಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಯಾಗಿದ್ದ ಶ್ರಿ ಎನ್.ಎಸ್. ನಾಗಶೆಟ್ಟಿ ಅವರ ಮೇಲೆ ದ್ವೇಷವನ್ನು ಸಾಧಿಸುವ ಉದ್ದೇಶದಿಂದ ಅವರ ವಿರುದ್ಧ ಒಟ್ಟು 19 ಆಪಾದನೆಗಳನ್ನೊಳಗೊಂಡ ದೂರು ಅರ್ಜಿಯನ್ನು ನೇರವಾಗಿ ಅಂದಿನ ಮಾನ್ಯ ಯೋಜನಾ ಸಚಿವರಿಗೆ ಸಲ್ಲಿಸಿದ್ದರಿಂದ, ಸದರಿ ದೂರು ಅರ್ಜಿಯ ಬಗ್ಗೆ ಸರ್ಕಾರದ ನಿರ್ದೇಶನದಂತೆ ಹಾವೇರಿ ಜಿಲ್ಲಾಧಿಕಾರಿಗಳಿಂದ ತನಿಖೆಯನ್ನು ನಡೆಸಿ, ಸದರಿ ತನಿಖೆಯಲ್ಲಿ ಎಲ್ಲಾ 19 ಆಪಾದನೆಗಳು ಸತ್ಯಕ್ಕೆ ದೂರವಾದವುಗಳೆಂದು ರುಜುವಾತಾದ ಕಾರಣ, ಈ ನೌಕರರು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966 ರ ನಿಯಮ 3 ಮತ್ತು ನಿಯಮ 27 ನ್ನು ಉಲ್ಲಂಘಿಸಿದಂತಾಗಿದ್ದು, ಈ 3 ನೌಕರರು ಸಮೂಹ 'ಸಿ' ವೃಂದದ ನೌಕರರಾಗಿದ್ದುದರಿಂದ ಇವರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲು ಸರ್ಕಾರವು ತೀರ್ಮಾನಿಸಿ, ಅದರಂತೆಯೆ ಮುಂದಿನ ಕ್ರಮ ಕೈಗೊಳ್ಳುವಂತೆ ಶಿಸ್ತು ಪ್ರಾಧಿಕಾರವಾದ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶಕರಿಗೆ ಸೂಚಿಸಲಾಗಿತ್ತು. ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶಕರು ಮೇಲ್ಕಾಣಿಸಿದ ಸಿ.ಸಿ.ಎ. ನಿಯಮಗಳ ನಿಯಮ 13ರ ಮೇರೆಗೆ ಈ ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲು ಒಬ್ಬ ನಿವೃತ್ತ ನ್ಯಾಯಾಧೀಶರನ್ನು ನೇಮಿಸಿ, ಸದರಿ ಇಲಾಖಾ ವಿಚಾರಣೆಯಲ್ಲಿ ಶ್ರೀ ಪ್ರಕಾಶ್ ವಿ. ಮತ್ತಿಹಳ್ಳಿ, ಸಾಂಖ್ಯಿಕ ನಿರೀಕ್ಷಕರು ಇವರ ದುರ್ನಡತೆಯು ಸಾಬೀತಾಗಿದ್ದುದರಿಂದ, ಶಿಸ್ತು ಪ್ರಾಧಿಕಾರವಾದ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶಕರು ಶ್ರೀ ಪ್ರಕಾಶ್ ವಿ. ಮತ್ತಿಹಳ್ಳಿ, ಸಾಂಖ್ಯಿಕ ನಿರೀಕ್ಷಕರು ಇವರಿಗೆ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಸಹಿತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಿರುತ್ತಾರೆ.

ಈ ನೌಕರರು, ತಮಗೆ ಉಂಟಾಗುತ್ತಿದ್ದ ಅವಮಾನ, ಅಸಮಾಧಾನ ಮತ್ತು ಮಾನಸಿಕ ಹಿಂಸೆ, ದೌರ್ಜನ್ಯ ಹಾಗೂ ಜಾತಿ ಕೀಳರಿಮೆ ಮತ್ತು ನಿರಂತರ ಕಿರುಕುಳದ ಪ್ರತಿಫಲವಾಗಿ ಮನನೊಂದು ಅನ್ಯ ಮಾರ್ಗವಿಲ್ಲದೆ ಅಂದಿನ ಕಛೇರಿ ಮುಖ್ಯಸ್ಥರಾಗಿದ್ದ ಹಾವೇರಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ವಿರುದ್ಧ ನೇರವಾಗಿ ಅಂದಿನ ಮಾನ್ಯ ಯೋಜನಾ ಸಚಿವರಿಗೆ ದೂರು ಅರ್ಜಿಯನ್ನು ಸಲ್ಲಿಸಲಾಗಿತ್ತೆಂದು ನೀಡಿರುವ ಹೇಳಿಕೆಯನ್ನು ಗಮನಿಸಲಾಗಿದೆ. ಸಾಮಾನ್ಯವಾಗಿ ಹಾಗೂ ಸ್ವಾಭಾವಿಕವಾಗಿ ಯಾವುದೇ ವ್ಯಕ್ತಿಯೂ ಮತ್ತೊಬ್ಬ ವ್ಯಕ್ತಿಯ ವಿರುದ್ಧ ಕಾರಣವಿಲ್ಲದೇ ದೂರು ಅರ್ಜಿಯನ್ನು ಸಲ್ಲಿಸಲು ಸಾಧ್ಯವಿಲ್ಲವೆಂದು ಹಾಗೂ ಬಲವಾದ ಕಾರಣಗಳಿದ್ದಾಗಲೇ ಇಂತಹ ಕೃತ್ಯಕ್ಕೆ ಕೈ ಹಾಕುವ ಸಾಧ್ಯತೆ ಇರುತ್ತೆದೆಂಬುದಾಗಿ ಅಭಿಪ್ರಾಯಪಡಲಾಗಿದೆ. ಈ ಅಂಶವನ್ನು ಈ ಸಂಧರ್ಭದಲ್ಲಿ ತುಲನಾತ್ಮಕವಾಗಿ, ನ್ಯಾಯೋಚಿತವಾಗಿ ಮತ್ತು ನಿಷ್ಪಕ್ಷಪಾತವಾಗಿ ಗಮನಿಸುವ ಅವಶ್ಯಕತೆ ಇರುತ್ತದೆ. ಆದಾಗ್ಯೂ ಈ ನೌಕರರು ತಮ್ಮ ಕಾರ್ಯನಿರ್ವಹಣೆಯ ಹಾಗೂ ಸಂಬಂಧಪಟ್ಟ ಸೇವಾ ನಿಯಮಗಳ ಚೌಕಟ್ಟಿನ ಎಲ್ಲೆಯನ್ನು ಮೀರಿ ಕಛೇರಿ ಮುಖ್ಯಸ್ಥರ ಬಗ್ಗೆ ನೇರವಾಗಿ ಮಾನ್ಯ ಇಲಾಖಾ ಸಚಿವರಿಗೆ ದೂರು ಅರ್ಜಿಯನ್ನು ಸಲ್ಲಿಸಿರುವುದು ನಿಯಮಬಾಹಿರ ಕೃತ್ಯವಾಗಿರುತ್ತದೆ. ಇವರು ತಮ್ಮ ಅಹವಾಲನ್ನು ಇಲಾಖಾ ಮುಖ್ಯಸ್ಥರಿಗೆ ಸಲ್ಲಿಸಬಹುದಾಗಿತ್ತು.

ಆದಾಗ್ಯೂ, ಮೇಲಿನ ಕಂಡಿಕೆಗಳಲ್ಲಿ ವಿವರಿಸಿರುವಂತೆ ಈ ನೌಕರರ ದುರ್ನಡತೆಯ ಯಾವುದೇ ಅತ್ಯಂತ ಗಂಭೀರ ಸ್ವರೂಪದ ದುರ್ನಡತೆಯಾಗಿರುವುದಿಲ್ಲವಾದ್ದರಿಂದ, ಅಂದರೆ ಇವರಿಂದ ಸರ್ಕಾರದ ಹಣದ ದುರುಪಯೋಗವಾಗಲಿ ಅಥವಾ ಯಾವುದೇ ಕ್ರಿಮಿನಲ್ ಅಪರಾಧವಾಗಲಿ ಎಸಗಿರುವುದು ಕಂಡುಬರುತ್ತಿಲ್ಲವಾದ್ದರಿಂದ ಇವರಿಗೆ ಶಿಸ್ತು ಪ್ರಾಧಿಕಾರವಾದ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶಕರು ಮೇಲೆ ಓದಲಾದ ಆದೇಶದಲ್ಲಿ ವಿಧಿಸಿರುವ ದಂಡನೆಯನ್ನು ರದ್ದುಪಡಿಸಿ, ಇನ್ನುಮುಂದೆ ಇಂತಹ ದುರ್ವರ್ತನೆ ಮರುಕಳಿಸದಂತೆ ಎಚ್ಚರಿಕೆಯಿಂದ ವರ್ತಿಸತಕ್ಕದ್ದೆಂದು ಸೂಚಿಸಿ, ಇವರಿಗೆ ಕರ್ನಾಟಕ ನಾಗರಿಕ ಸೇವಾ (ಸಿ.ಸಿ.ಎ) ನಿಯಮಗಳು 1957 ರ ನಿಯಮ 8 (i) ರ ಮೇರೆಗೆ ವಾಗ್ದಂಡನೆ ವಿಧಿಸಲು ತೀರ್ಮಾನಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಪಿಡಿ 24 ಎಸ್ಎಂಸಿ 2010 ಬೆಂಗಳೂರು, ದಿನಾಂಕ: 29-07-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಮೇಲ್ಮನವಿ ಪ್ರಾಧಿಕಾರವಾದ ಸರ್ಕಾರವು ಶ್ರೀ ಪ್ರಕಾಶ್ ವಿ. ಮತ್ತಿಹಳ್ಳಿ, ಸಾಂಖ್ಯಿಕ ನಿರೀಕ್ಷಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ಪ್ರಸ್ತುತ ನಿಯೋಜನೆ ಮೇರೆಗೆ ಮಾನ್ಯ ಬೃಹತ್ ಮತ್ತು ಮಧ್ಯಮ ನೀರಾವರಿ ಸಚಿವರ ಆಪ್ತ ಸಹಾಯಕರು ಇವರಿಗೆ ಶಿಸ್ತು ಪ್ರಾಧಿಕಾರವಾದ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶಕರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ವಿಧಿಸಿರುವ ದಂಡನೆಯನ್ನು ರದ್ದುಪಡಿಸಿ, ಇನ್ನುಮುಂದೆ ಇಂತಹ ದುರ್ವರ್ತನೆ ಮರುಕಳಿಸದಂತೆ ಎಚ್ಚರಿಕೆಯಿಂದ ವರ್ತಿಸತಕ್ಕದ್ದೆಂದು ಸೂಚಿಸಿ, ಸದರಿ ನೌಕರರಿಗೆ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮಗಳು 1957 ರ ನಿಯಮ 8 (ii) ರ ಮೇರೆಗೆ ವಾಗ್ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

(ವಿ. ಸಾಯಿಬಾಬ)

ಸರ್ಕಾರದ ಅಧೀನ ಕಾರ್ಯದರ್ಶಿ

ಯೋಜನೆ, ಕಾರ್ಯಕ್ರಮ ಸಂಯೋಜನೆ

ಮತ್ತು ಸಾಂಖ್ಯಿಕ ಇಲಾಖೆ (ಎಸ್-5)

ಪಿ.ಆರ್. 2059

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆಯನ್ನು ವಿಭಜಿಸಿ ಯಾದಗಿರಿ ಜಿಲ್ಲೆಯನ್ನು ಹೊಸದಾಗಿ ಸ್ಥಾಪಿಸಲಾಗಿರುವುದರಿಂದ ಇಲಾಖೆಯ ಸಿಬ್ಬಂದಿ ಮಾದರಿ ರಚನೆಯನ್ನು ಮರು ವಿನ್ಯಾಸಗೊಳಿಸುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 59 ಭೂದಾಪು 2008 ದಿ: 26-12-2009.
2) ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1029 ವೆಚ್ಚ 7/2009 ದಿ: 29-12-2009.
3) ಸರ್ಕಾರಿ ಆದೇಶ ಸಂಖ್ಯೆ: ಕಂಇ 71 ಭೂದಾಪು 2009 ದಿ: 23-02-2010.
4) ಕೈಗಾರಿಕಾಭಿವೃದ್ಧಿ ಆಯುಕ್ತರ ಪತ್ರ ಸಂಖ್ಯೆ: ಆಡಳಿತ/ಸಿಬ್ಬಂದಿ/ಇ2/112/2009-10, ದಿ: 23-11-2009 ಹಾಗೂ 18-12-2009.
5) ಕೈಗಾರಿಕಾಭಿವೃದ್ಧಿ ಆಯುಕ್ತರ ಪತ್ರ ಸಂಖ್ಯೆ: ಆಡಳಿತ/ಸಿಬ್ಬಂದಿ/ಇ2/112/2009-10, ದಿ: 05-03-2010
6) ಕೈಗಾರಿಕಾಭಿವೃದ್ಧಿ ಆಯುಕ್ತರ ಪತ್ರ ಸಂಖ್ಯೆ: ಆಡಳಿತ/ಸಿಬ್ಬಂದಿ/ಇ2/112/2009-10, ದಿ: 26-03-2010.
7) ಸರ್ಕಾರಿ ಆದೇಶ ಸಂಖ್ಯೆ: ವಾಕೈ 216 ಕೈಸೇವಿ 2009 (ಭಾಗ-1) ದಿ: 19-05-2010.
8) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಪತ್ರ ಸಂಖ್ಯೆ: ಆಡಳಿತ/ಸಿಬ್ಬಂದಿ/ಇ2/112/2010-11 ದಿ: 19-07-2010.

* * *

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆಯನ್ನು ವಿಭಜಿಸಿ ನೂತನ ಯಾದರಿರ್ ಜಿಲ್ಲೆಯನ್ನು ಸ್ಥಾಪಿಸಲಾಗಿರುವುದರಿಂದ ಉಲ್ಲೇಖಿತ (7)ರ ಆದೇಶದಲ್ಲಿ ಜಿಲ್ಲಾ ಕೈಗಾರಿಕಾ ಕೇಂದ್ರ, ಯಾದಗಿರ್ ಕಛೇರಿಯ ರಾಜ್ಯ ವಲಯ/ಜಿಲ್ಲಾ ಪಂಚಾಯತ್ ವಲಯಗಳಿಗೆ ೦ಜ-೩೦ಭಿ ಆಧಾರದ ಮೇಲೆ ಹುದ್ದೆಗಳನ್ನು ಸೃಜಿಸಿ/ ಸ್ಥಳಾಂತರಿಸಿ ಸರ್ಕಾರದ ಮಂಜೂರಾತಿ ನೀಡಲಾಗಿರುತ್ತೆ.

ಕೈಗಾರಿಕಾ ನಿರ್ದೇಶನಾಲಯ ಉಲ್ಲೇಖ (8) ರ ಪತ್ರದಲ್ಲಿ ಅವಿಭಜಿತ ಗುಲ್ಬರ್ಗಾ ಜಿಲ್ಲೆಯ (1) ಯಾದಗಿರ್ (2) ಶಹಾಪೂರ ಹಾಗೂ (3) ಸುರಪೂರ ತಾಲ್ಲೂಕುಗಳು ನೂತನ ಯಾದಗಿರ್ ಜಿಲ್ಲೆಯ ಆಡಳಿತ ಕಾರ್ಯ ವ್ಯಾಪ್ತಿಗೆ ಒಳಪಡುವುದರಿಂದ ಈ ತಾಲ್ಲೂಕುಗಳಲ್ಲಿನ ಕೈಗಾರಿಕಾ ವಿಸ್ತರಣಾಧಿಕಾರಿ ಹುದ್ದೆಗಳನ್ನು ಗುಲ್ಬರ್ಗಾ ಜಿಲ್ಲೆಯ ಆಡಳಿತ ವ್ಯಾಪ್ತಿಯಿಂದ ಯಾದಗಿರ್ ಜಿಲ್ಲೆಯ ಆಡಳಿತ ವ್ಯಾಪ್ತಿಗ ತಂದು ಈ ಜಿಲ್ಲೆಗಳಲ್ಲಿನ ಸಿಬ್ಬಂದಿ ಮಾದರಿ ರಚನೆಯನ್ನು ಮರು ವಿನ್ಯಾಸಗೊಳಿಸಲು ಕೋರಲಾಗಿರುತ್ತದೆ. ಸದರಿ ಹುದ್ದೆಗಳನ್ನು ನೂತನ ಯಾದಗಿರ್ ಜಿಲ್ಲೆಗೆ ಸ್ಥಳಾಂತರಿಸುವ ವಿಷಯವನ್ನು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 216 ಕೈಸೇವಿ 2009, ಭಾಗ-2, ಬೆಂಗಳೂರು, ದಿನಾಂಕ: 27ನೇ ಜುಲೈ, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ/ಯಾದಗಿರ್ ಜಿಲ್ಲೆಗಳಲ್ಲಿನ ಇಲಾಖೆಯ ಸಿಬ್ಬಂದಿ ಮಾದರಿ ರಚನೆಯನ್ನು ಮರು ವಿನ್ಯಾಸಗೊಳಿಸಿ ಗುಲ್ಬರ್ಗಾ ಜಿಲ್ಲೆಯ ಆಡಳಿತ ವ್ಯಾಪ್ತಿಯಲ್ಲಿನ ಕೆಳಕಂಡ ಕೈಗಾರಿಕಾ ವಿಸ್ತರಣಾಧಿಕಾರಿ ಹುದ್ದೆಗಳನ್ನು ಉಪ ನಿರ್ದೇಶಕರು (ಖಾಗ್ರಾ) ಕಛೇರಿ, ಜಿಲ್ಲಾ ಪಂಚಾಯತ್, ಯಾದಗಿರ್ ಆಡಳಿತ ವ್ಯಾಪ್ತಿಗೆ ಈ ಕೂಡಲೇ ಜಾರಿಗೆ ಬರುವಂತೆ ಒಳಪಡಿಸಿ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಉಪ ನಿರ್ದೇಶಕರು (ಖಾಗ್ರಾ), ಜಿಲ್ಲಾ ಪಂಚಾಯತ್, ಯಾದಗಿರ್ ಕಛೇರಿಯ ಆಡಳಿತ ವ್ಯಾಪ್ತಿಯಲ್ಲಿ:

| ಕ್ರ. ಸಂ. | ಪದನಾಮ | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ | ಷರಾ |
|---|---|---|---|---|
| 1 | ಕೈಗಾರಿಕಾ ವಿಸ್ತರಣಾಧಿಕಾರಿ (ಯಾದಗಿರ್, ಶಹಾಪೂರ ಹಾಗೂ ಸುರಪೂರ) | 3 (ಉಲ್ಲೇಖಿತ ತಾಲ್ಲೂಕುಗಳಲ್ಲಿನ ತಲಾ ಒಂದು ಹುದ್ದೆ) | 8825-16000 | ಅವಿಭಜಿತ ಗುಲ್ಬರ್ಗಾ ಜಿಲ್ಲೆಯ ಆಡಳಿತ ವ್ಯಾಪ್ತಿಯಿಂದ ಯಾದಗಿರ್ ಜಿಲ್ಲೆಗೆ ಸ್ಥಳಾಂತರಿಸಿದೆ. |

ಸ್ಥಳಾಂತರಿಸಿದ ಹುದ್ದೆಗಳಲ್ಲಿ ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿಗಳನ್ನು ಮುಂದುವರೆಸಲಾಗಿದೆ.

ಮೇಲ್ಕಂಡ ಮರು ವಿನ್ಯಾಸದ ಹಿನ್ನೆಲೆಯಲ್ಲಿ ಪೂರಕ ಆಡಳಿತ ಕ್ರಮಗಳನ್ನು ಜಾರಿಗೊಳಿಸತಕ್ಕದ್ದೆಂದು ಕೈಗಾರಿಕಾ ನಿರ್ದೇಶನಾಲಯ / ಜಂಟಿ ನಿರ್ದೇಶಕರು. ಜಿಲ್ಲಾ ಕೈಗಾರಿಕಾ ಕೇಂದ್ರ. ಗುಲ್ಬರ್ಗಾ/ಯಾದಗಿರ್ ಇವರುಗಳಿಗೆ ನಿರ್ದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಬಿ.ಸಿ. ಪ್ರಕಾಶ್)**
ಸರ್ಕಾರದ ಅಧೀನ ಕಾರ್ಯದರ್ಶಿ
ವಾಣಿಜ್ಯ ಮತು ಕೈಗಾರಿಕೆ ಇಲಾಖೆ (ಸೇವೆಗಳು)

ಪಿ.ಆರ್. 2060

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಮಾಹಿತಿ ಶಿಕ್ಷಣ ಮತ್ತು ಸಂಪರ್ಕದ ಮೇಲೆ ಕೈಪಿಡಿ ಆರೋಗ್ಯ ಮತ್ತು ಪೌಷ್ಠಿಕಾಂಶ ಹೊಸ ಯೋಜನೆಗೆ ಮಂಜೂರಾತಿ ನೀಡುವ ಕುರಿತು.

**ಪ್ರಸ್ತಾವನೆ :**

2010–11 ಸಾಲಿನ ಮಾಹಿತಿ ಶಿಕ್ಷಣ ಮತ್ತು ಸಂಪರ್ಕದ ಮೇಲೆ ಕೈಪಿಡಿ –ಆರೋಗ್ಯ ಮತ್ತು ಪೌಷ್ಠಿಕಾಂಶ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸಲು ಮಂಜೂರಾತಿ ನೀಡುವಂತೆ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಕೋರಿರುತ್ತಾರೆ.

ಸಮಗ್ರ ಶಿಶು ಅಭಿವೃದ್ಧಿ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಅಂಗನವಾಡಿ ಕೇಂದ್ರಗಳ ಮೂಲಕ ಅನುಷ್ಠಾನಗೊಳಿಸುತ್ತಿದ್ದು. ರಾಜ್ಯದ ಗ್ರಾಮೀಣ ಗುಡ್ಡಗಾಡು ಹಾಗೂ ನಗರಗಳ ಕೊಳಚೆ ಪ್ರದೇಶದಲ್ಲಿ ಪ್ರತಿ 800/300 ಜನಸಂಖ್ಯೆಗೆ ಒಂದರಂತೆ ಒಟ್ಟು 60046 ಅಂಗನವಾಡಿ ಕೇಂದ್ರ ಹಾಗೂ 3331 ಮಿನಿ ಅಂಗನವಾಡಿ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ. ಪ್ರತಿ ಅಂಗನವಾಡಿ ಕೇಂದ್ರದಲ್ಲಿ ಒಬ್ಬ ಕಾರ್ಯಕರ್ತೆ ಹಾಗೂ ಒಬ್ಬ ಸಹಾಯಕಿಯರು ಈ ಯೋಜನೆಯನ್ನು ಸಮುದಾಯದಲ್ಲಿ ಅನುಷ್ಠಾನಗೊಳಿಸುತ್ತಿರುತ್ತಾರೆ. ಸಮಗ್ರ ಶಿಶು ಅಭಿವೃದ್ಧಿ ಯೋಜನೆಯು ಈ ಕೆಳಕಂಡ 5 ಮುಖ್ಯ ಉದ್ದೇಶಗಳನ್ನು ಒಳಗೊಂಡಿದ್ದು, ಪೂರಕ ಪೌಷ್ಠಿಕ ಆಹಾರ, ಚುಚ್ಚುಮದ್ದು, ಆರೋಗ್ಯ ತಪಾಸಣೆ, ಮಾಹಿತಿ ಸೇವೆ (ರೆಫರಲ್) 3–6 ವರ್ಷದ ಶಾಲಾ ಪೂರ್ವ ಶಿಕ್ಷಣ, ತಾಯಂದಿರು ಮತ್ತು ಮಹಿಳೆಯರಿಗೆ ಆರೋಗ್ಯ ಮತ್ತು ಆಹಾರದ ಕುರಿತು ತಿಳುವಳಿಕೆಗಳನ್ನು ನೀಡುವ 6 ಸೇವೆಗಳನ್ನು ಒದಗಿಸುತ್ತಿದೆ ;

ಅ) 0–6 ವರ್ಷದ ಮಕ್ಕಳ ಆರೋಗ್ಯ, ಪೌಷ್ಠಿಕ ಮಟ್ಟವನ್ನು ವೃದ್ಧಿಸುವುದು.

ಆ) ಮಗುವಿನ ದೈಹಿಕ ಮಾನಸಿಕ ಮತ್ತು ಸಾಮಾಜಿಕ ಬೆಳವಣಿಗೆಗೆ ಭದ್ರ ಅಡಿಪಾಯ ಹಾಕುವುದು.

ಇ) ಮಕ್ಕಳಲ್ಲಿ ಸಾವು, ಅನಾರೋಗ್ಯ, ಅಪೌಷ್ಠಿಕತೆ ಮತ್ತು ಶಾಲಾ ಬಿಡುವಿಕೆಯ ಪ್ರಮಾಣವನ್ನು ಕಡಿಮೆಗೊಳಿಸುವುದು.

ಈ) ಶಿಶು ಅಭಿವೃದ್ಧಿ ಕಾರ್ಯಕ್ರಮವನ್ನು ಉತ್ತಮಗೊಳಿಸುವ ಕಾರ್ಯ ನೀತಿ ಮತ್ತು ಅದನ್ನು ಜಾರಿಗೊಳಿಸುವ ದಿಸೆಯಲ್ಲಿ ಪರಿಣಾಮಕಾರಿಯಾದ ಸಮನ್ವಯತೆಯನ್ನು ಸಾಧಿಸುವುದು.

ಉ) ಆರೋಗ್ಯ ಮತ್ತು ಪೌಷ್ಠಿಕತೆಯ ಶಿಕ್ಷಣವನ್ನು ಕೊಡುವ ಮೂಲಕ ತಾಯಂದಿರಲ್ಲಿ ತಮ್ಮ ಮಕ್ಕಳ ಆರೋಗ್ಯ ಮತ್ತು ಪೌಷ್ಠಿಕತೆಯನ್ನು ನೋಡಿಕೊಳ್ಳುವ ಕುರಿತು ಸಾಮರ್ಥ್ಯವನ್ನು ಹೆಚ್ಚಿಸುವುದು.

ರಾಜ್ಯ ಮಹಿಳೆಯರು, ಕಿಶೋರಿಯರು ಹಾಗೂ ಮಕ್ಕಳಲ್ಲಿ ಹೆಚ್ಚಿನವರು ಅಪೌಷ್ಠಿಕತೆ, ರಕ್ತ ಹೀನತೆ, ವಿವಿಧ ರೀತಿಯ ಪೌಷ್ಠಿಕಾಂಶಗಳ ಕೊರತೆಯಿಂದ ನರಳುತ್ತಿದ್ದು, ಸೂಕ್ತ ತಿಳುವಳಿಕೆಯನ್ನು ನೀಡುವುದರ ಮೂಲಕ ಅಪೌಷ್ಠಿಕತೆ ಮತ್ತು ಮರಣ ಪ್ರಮಾಣ ತಗ್ಗಿಸುವುದು ಹಾಗೂ ಅಂಗನವಾಡಿ ಕಾರ್ಯಕರ್ತೆಯರು ಆರೋಗ್ಯ ಇಲಾಖೆಯ ಸಹಕಾರದೊಂದಿಗೆ ಗ್ರಾಮ ಆರೋಗ್ಯ ದಿನವನ್ನು ಆಚರಿಸುವ ಮೂಲಕ ತಾಯಂದಿರಿಗೆ, ಮಹಿಳೆಯರಿಗೆ ಮಕ್ಕಳ ಹಾಗೂ ಮಹಿಳೆಯರ ಆರೋಗ್ಯದ ಬಗ್ಗೆ ತಿಳುವಳಿಕೆಯನ್ನು ನೀಡುವುದು ಯೋಜನೆಯ ಮುಖ್ಯ ಉದ್ದೇಶವಾಗಿರುತ್ತದೆ.

ಈ ಒಂದು ಸೇವೆಯ ಅಂಗವಾಗಿ ಅಂಗನವಾಡಿ ಕಾರ್ಯಕರ್ತೆಯರು ಪ್ರತಿ ದಿವಸ ಸುಮಾರು 2 ರಿಂದ 3 ಮನೆಗಳಿಗೆ ಭೇಟಿ ನೀಡಿ ತಾಯಂದಿರಿಗೆ ತಿಳುವಳಿಕೆ ನೀಡುತ್ತಿದ್ದಾರೆ. ತಿಂಗಳಲ್ಲಿ 2 ಬಾರಿ ತಾಯಂದಿರ ಸಭೆ ಹಾಗೂ ಒಂದು ಬಾರಿ ಆರೋಗ್ಯ ಇಲಾಖೆಯ ಸಹಕಾರದೊಂದಿಗೆ ಗ್ರಾಮ ಆರೋಗ್ಯ ದಿನವನ್ನು ಅಚರಿಸುವ ಮೂಲಕ ತಾಯಂದಿರಿಗೆ, ಮಹಿಳೆಯರಿಗೆ ಮಕ್ಕಳ ಅಭಿವೃದ್ಧಿ ಹಾಗೂ ಮಹಿಳೆಯ ಆಹಾರ ಹಾಗೂ ಆರೋಗ್ಯ ಕುರಿತು ತಿಳುವಳಿಕೆಯನ್ನು ನೀಡುತ್ತಿರುತ್ತಾರೆ.

ಮೇಲ್ಕಾಣಿಸಿದ ಸಂದರ್ಭಗಳಲ್ಲಿ ತಿಳುವಳಿಕೆ ನೀಡಬೇಕಿರವ 48 ವಿಷಯಗಳನ್ನು ತಜ್ಞರೊಂದಿಗೆ ಚರ್ಚಿಸಿ ಮಹಿಳಾ ಮತ್ತು ಮಕ್ಕಳ ಅಭೀವೃದ್ಧಿ ಇಲಾಖೆಯು ಆಯ್ಕೆ ಮಾಡಲಾಗಿರುತ್ತದೆ. ಈ ವಿಷಯಗಳ ಕುರಿತು ಅಂಗನವಾಡಿ ಕಾರ್ಯಕರ್ತೆಯರು ಆ ತಾಯಂದಿರಿಗೆ, ಮಹಿಳೆಯರಿಗೆ ಹೇಳಬೇಕಿರುವ ವಿಷಯದ ವಿವರವನ್ನು ಸಂಬಂಧಪಟ್ಟ ತಜ್ಞರಿಂದ ಪಡೆಯಲಾಗಿದ್ದು, ಸಮಗ್ರ ಕೈಪಿಡಿಯನ್ನು ಮುದ್ರಿಸಿ ನೀಡಲು ಉದ್ದೇಶಿಸಲಾಗಿದೆ. ಕೈಪಿಡಿಯೊಂದಿಗೆ 3–4 ವಿಷಯಗಳನ್ನೊಳಗೊಂಡ ಚಿಕ್ಕ ಚಿಕ್ಕ ಪ್ಲಾಷ್‌ಕಾರ್ಡ್ ಅಥವಾ ಫ್ಲಿಪ್ ಚಾರ್ಟ್‌ಗಳನ್ನು ಮುದ್ರಿಸಿ ಎಲ್ಲಾ ಮೇಲ್ವಿಚಾರಕಿಯರು ಹಾಗೂ ಅಂಗನವಾಡಿ ಕಾರ್ಯಕರ್ತೆಯರಿಗೆ ವಿತರಿಸಲು ಯೋಜಿಸಲಾಗಿದೆ. ಈ ಕಾರ್ಯವು ಈಗಾಗಲೇ ಚಾರಿಯಲ್ಲಿದ್ದು ಸಲಹೆಗಾರರನ್ನು ನೇಮಿಸಿಕೊಂಡು ಚಿತ್ರಣಗಳ ಮೂಲಕ ಮುದ್ರಿಸಲಾಗುತ್ತಿದೆ.

ಅಪರ ಮುಖ್ಯ ಕಾರ್ಯದರ್ಶಿ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯ ಅಧಿಕಾರಯುತ ಸಮಿತಿಯ ದಿನಾಂಕ: 27–05–2010 ರ ಸಭೆಯಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಅನುಮೋದನೆ ನೀಡಲಾಗಿದೆ.

ನಿರ್ದೇಶರು, ಮಹಿಳಾ ಮತ್ತು ಮಕ್ಕಳ ಅಭೀವೃದ್ಧಿ ಇಲಾಖೆ ಇವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಈ ಕೆಳಗೆ ಸೂಚಿಸಿದಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 124 ಐಸಿಡಿ 2010, ಬೆಂಗಳೂರು, ದಿನಾಂಕ: 30ನೇ ಜೂನ್, 2010**

ಮೇಲಿನ ಪ್ರಸ್ತಾವನೆಯ ಹಿನ್ನೆಲೆಯಲ್ಲಿ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯಡಿಯ ಫಲಾನುಭವಿಗಳು, 0-6 ವರ್ಷದ ಮಕ್ಕಳು, ಗರ್ಭಿಣಿ/ಬಾಣಂತಿಯರು, ಕಿಶೋರಿಯರು ಇವರಿಗೆ ನೀಡುತ್ತಿರುವ 6 ಸೇವೆಗಳ ಕುರಿತು ಅಂದರೆ ಪೂರಕ ಪೌಷ್ಠಿಕ ಆಹಾರ, ಚುಚ್ಚು ಮದ್ದು, ಆರೋಗ್ಯ ತಪಾಸಣೆ, ಮಾಹಿತಿ ಸೇವೆ, ಶಾಲಾಪೂರ್ವ ಶಿಕ್ಷಣ ಮತ್ತು ತಾಯಂದಿರಿಗೆ/ ಮಹಿಳೆಯರಿಗೆ ಆರೋಗ್ಯ ಹಾಗೂ ಆಹಾರದ ಕುರಿತಾದ ಮಾಹಿತಿಯನ್ನು ಒಳಗೊಂಡ ಪ್ರಸ್ತಕವನ್ನು ನಿಯಮಗಳನ್ನು ಪಾಲಿಸಿಕೊಂಡು ಮುದ್ರಿಸಿ ಅಂಗನವಾಡಿ ಕಾರ್ಯಕರ್ತೆಯರು/ ಸಹಾಯಕಿಯರ ಮೂಲಕ ಹಂಚಿಕೆ ಮಾಡುವ ಮಾಹಿತಿ ಶಿಕ್ಷಣ ಮತ್ತ ಸಂಪರ್ಕದ ಮೇಲೆ ಕೈಪಿಡಿ- ಆರೋಗ್ಯ ಮತ್ತು ಪೌಷ್ಠಿಕಾಂಶ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸಲು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರಿಗೆ ಮಂಜೂರಾತಿ ನೀಡಲಾಗಿದೆ.

ಇತ್ತೀಚಿನ ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ನಿಯಮಗಳನ್ನು ಆಧರಿಸಿ ರೂಪಿಸಲಾದ ಯೋಜನೆಗೆ ಸಂಬಂಧಿಸಿದ ಮಾರ್ಗಸೂಚಿ/ರೂಪುರೇಷೆಗಳನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮಂತ್ರಾಲಯ, ಭಾರದ ಸರ್ಕಾರ ರವರಿಂದ ಪಡೆದು ಈ ಮಾರ್ಗಸೂಚಿಗಳನ್ನು ಸ್ಥಳೀಯ ಉಪಯೋಗಕ್ಕಾಗಿ ಕನ್ನಡ ಭಾಷೆಗೆ ತರ್ಜುಮೆ ಮಾಡಿ ಮುದ್ರಿಸಲು ಅವಶ್ಯ ಕ್ರಮ ಕೈಗೊಳ್ಳುವಂತೆ ಸಹ ಸೂಚಿಸಲಾಗಿದೆ.

ಇದಕ್ಕೆ ಸಂಭವಿಸುವ ವೆಚ್ಚವನ್ನು ಮಾಹಿತಿ ಶಿಕ್ಷಣ ಮತ್ತು ಸಂಪರ್ಕದ ಮೇಲೆ ಕೈಪಿಡಿ- ಆರೋಗ್ಯ ಮತ್ತು ಪೌಷ್ಠಿಕಾಂಶ ಯೋಜನೆ ಲೆಕ್ಕಶೀರ್ಷಿಕೆ 2235-02-102-0-34 (ಯೋಜನೆ) ಅಡಿಯಲ್ಲಿ ಒದಗಿಸಿರುವ ಆಯವ್ಯಯದಲ್ಲಿ ಭರಿಸತಕ್ಕದ್ದು

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 22 ಐಎಂಎಂ 2010, ದಿನಾಂಕ: 13-05-2010 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 308 ವೆಚ್ಚ-3/10 ದಿನಾಂಕ: 26-05-2010 ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ವಿ. ಶಿವಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ-1
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಪಿ.ಆರ್. 2061

## ಕಂದಾಯ ಸಚಿವಾಲಯ

**ವಿಷಯ :** ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ, ತಹಶೀಲ್ದಾರ್, ಚನ್ನಪಟ್ಟಣ ತಾಲ್ಲೂಕು ಪ್ರಸ್ತುತ ಕಂದಾಯ ಅಧಿಕಾರಿ, ಬಿ.ಎಂ.ಟಿ.ಎಫ್. ಬಿಬಿಎಂಪಿ ಕಟ್ಟಡ, ಎನ್.ಆರ್.ಚೌಕ, ಬೆಂಗಳೂರು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕೈಬಿಡುವ ಕುರಿತು - ಆದೇಶ

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಕಂಇ 11 ಎಡಿಇ 2007 ದಿ: 24-03-2007.
2) ಆರ್ಥಿಕ ಸರ್ಕಾರದ ಆದೇಶ ಸಂಖ್ಯೆ: ಕಂಇ 11 ಎಡಿಇ 2007 ದಿ: 24-10-2007.
3) ಸರ್ಕಾರದ ಸಮ ಸಂಖ್ಯೆಯ ಕಾರಣ ಕೇಳುವ ನೋಟೀಸು ದಿನಾಂಕ: 19-06-2008.
4) ಶ್ರೀಮತಿ ಕೆ.ಹೆಚ್.ಭಾಗ್ಯವತಮ್ಮ, ತಹಶೀಲ್ದಾರ್ ಇವರ ಲಿಖಿತ ಹೇಳಿಕೆ ದಿನಾಂಕ: 03-10-2008.
5) ಸರ್ಕಾರದ ಆದೇಶ ಸಂಖ್ಯೆ: ಕಂಇ 11 ಎಡಿಇ 2007 ದಿ: 30-09-2009.
6) ಶ್ರೀ ಹೆಚ್.ವಿ. ರಾಮಚಂದ್ರರಾವ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀರು, ಹಾಗೂ ವಿಚಾರಣಾಧಿಕಾರಿಗಳು, ಬೆಂಗಳೂರು ಇವರ ವಿಚಾರಣಾ ವರದಿ ದಿನಾಂಕ: 9-4-2010.

**ಪ್ರಸ್ತಾವನೆ :**

ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ, ಹಿಂದಿನ ತಹಶೀಲ್ದಾರ್, ಚನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರು ರೈತರೊಬ್ಬರಿಂದ ಜಮೀನಿನ ವಿವಾದದ ಬಗ್ಗೆ ಇರುವ ಪ್ರಕರಣದಲ್ಲಿ ರೈತರಿಗೆ ಅನುಕೂಲ ಮಾಡಿಕೊಡಲು ಅಕ್ರಮ ಸಂಭಾವನೆ ರೂ. 10,000/-ಗಳನ್ನು ಪಡೆಯುತ್ತಿರುವ ದೃಶ್ಯವು ಟಿ.ವಿ. 9 ಚಾನಲ್‌ನಲ್ಲಿ ದಿನಾಂಕ: 24-3-2007 ರಂದು ಬಿತ್ತರಗೊಂಡಿರುತ್ತದೆ. ಇವರು ಅಕ್ರಮ ಸಂಭಾವನೆ ಪಡೆಯುತ್ತಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಸರ್ಕಾರವು ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ಸರ್ಕಾರದ ದಿನಾಂಕ: 24-03-2007 ರ ಆದೇಶದಲ್ಲಿ ಇವರ ದುರ್ನಡತೆ ಆಪಾದನೆಗೆ ಇಲಾಖಾ ವಿಚಾರಣೆ ಕಾಯ್ದಿರಿಸಿ, 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ನಿಯಮ 10(1)(ಡಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರ ಸರ್ಕಾರದ ದಿನಾಂಕ: 24-10-2007 ರ ಆದೇಶದಲ್ಲಿ, ಅಮಾನತ್ತುಗೊಂಡಿದ್ದ ಶ್ರೀಮತಿ ಕೆ.ಹೆಚ್. ಬಾಗವತಮ್ಮ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಇವರ ಅಮಾನತ್ತನ್ನು ತೆರವುಗೊಳಿಸಿ ಆದೇಶಿಸಲಾಗಿತ್ತು.

ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳು ತಮ್ಮ ದಿನಾಂಕ: 03-09-2007 ರ ಪತ್ರದಲ್ಲಿ ಶ್ರೀಮತಿ ಕೆ.ಹೆಚ್. ಬಾಗವತಮ್ಮ ಇವರ ವಿರುದ್ಧದ ಕ.ನಾ.ಸೇ. (ವ.ನಿ. ಮತ್ತು ಮೇ) ನಿಯಮಾವಳಿ 1957 ರಡಿಯಲ್ಲಿ ಕರಡು ದೋಷಾರೋಪಣಾ ಪಟ್ಟಿಯನ್ನು ಪೂರಕ ದಾಖಲೆಗಳೊಂದಿಗೆ ಕಳುಹಿಸಿದ್ದು, ಸರ್ಕಾರವು ಮೇಲೆ ಓದಲಾದ ಕ್ರಮ ಸಂಖ್ಯೆ (3) ದಿನಾಂಕ 19-06-2008 ರಲ್ಲಿ ಸದರಿಯವರಿಗೆ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಿದ್ದು, ಅದಕ್ಕೆ ಅಪಾದಿತ ನೌಕರರು ಮೇಲೆ ಓದಲಾದ ಕ್ರಮ ಸಂಖ್ಯೆ : (4) ದಿನಾಂಕ: 3-10-2008 ರಂದು ರಕ್ಷಣಾ ಹೇಳಿಕೆ ನೀಡಿ, ಸದರಿ ನೋಟೀಸಿಗೆ ಆಪಾದನೆಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ, ದೋಷಾರೋಪಣೆಯಲ್ಲಿ ವಿವರಿಸಿರುವ ಆಪಾದನೆಯ ಸತ್ಯಾಸತ್ಯತೆಯನ್ನು ಪರಿಶೀಲಿಸಿ, ಪ್ರಕರಣವನ್ನು ಇಲಾಖಾ ವಿಚಾರಣೆಗೆ ವಹಿಸಲು ನಿರ್ಧರಿಸಿ ಸರ್ಕಾರವು ಓದಲಾದ ಕ್ರಮ ಸಂಖ್ಯೆ: (5) ರ ದಿನಾಂಕ: 30-9-2009 ರ ಆದೇಶದಲ್ಲಿ, ಕ.ನಾ.ಸೇ. (ವ.ನಿ ಮತ್ತು ಮೇ) ನಿಯಾಮಾವಳಿಗಳ ನಿಯಮ 11 ರಡಿಯಲ್ಲಿ ಶ್ರೀ ಹೆಚ್.ವಿ. ರಾಮಚಂದ್ರರಾವ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಪ್ಯಾಲೇಸ್ ಗುಟ್ಟಹಳ್ಳಿ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು.

ಸರ್ಕಾರದ ಆದೇಶದಂತೆ, ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ, ಮೇಲೆ ಓದಲಾದ ಕ್ರಮ ಸಂಖ್ಯೆ: (6) ರಂತೆ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ, ಶ್ರೀಮತಿ ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ, ಹಿಂದಿನ ತಹಶೀಲ್ದಾರ್, ಇವರು ಈ ಹಿಂದೆ ಚನ್ನಪಟ್ಟಣ ತಾಲ್ಲೂಕು ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ರೈತರೊಬ್ಬರಿಂದ 10 ಸಾವಿರ ರೂಪಾಯಿಗಳನ್ನು ಅಕ್ರಮ ಸಂಭಾವನೆಯಾಗಿ ಪಡೆದ ದೃಶ್ಯವು ಟಿ.ವಿ. 9 ಸುದ್ದಿ ಚನಲ್‌ನಲ್ಲಿ ದಿನಾಂಕ : 24–03–2007 ರಂದು ಬಿತ್ತರಗೊಂಡಿದ್ದು, ಸದರಿ ಅಧಿಕಾರಿಯು ಭಷ್ಟಾಚಾರ ನಿರ್ಮೂಲನಾ ಕಾಯಿದೆ 1988ಕ್ಕೆ ವಿರುದ್ಧವಾಗಿ ವರ್ತಿಸಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಇವರನ್ನು ಅಮಾನತ್ತಿನಲ್ಲಿರಿಸಲಾಗಿತ್ತು. ಈ ಸಂಬಂಧ ಇಲಾಖಾ ವಿಚಾರಣೆ ನಡೆಸಲು ಶ್ರೀ ಹೆಚ್.ವಿ. ರಾಮಚಂದ್ರರಾವ್ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರನ್ನು ದಿನಾಂಕ : 30–09–2009 ರಂದು ನೇಮಿಸಲಾಗಿತ್ತು. ಅದರಂತೆ, ಇಲಾಖಾ ವಿಚಾರಣೆಯನ್ನು ನಡೆಸಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ವಿಚಾರಣಾ ಸಮಯದಲ್ಲಿ ದೂರು ದಾಖಲೆ ಮಾಡಿದ ವ್ಯಕ್ತಿಯ ಆಸ್ತಿ ವಿವರ, ಜಮೀನಿನ ಸರ್ವೆ ನಂಬರ್ ಯಾವುದೂ ತಿಳಿದು ಬಂದಿಲ್ಲ ಹಾಗೂ ಆಪಾದಿತರು ತೆಗೆದುಕೊಂಡರು ಎಂದು ಹೇಳಲಾದ ರೂ. 10,000–00 ಗಳನ್ನು ದೂರುದಾರರು ಕೊಟ್ಟಿಲ್ಲ, ಟಿ.ವಿ. 9 ಸಂಸ್ಥೆಯು ಕೊಟ್ಟಿದ್ದು, ಇದನ್ನು ಆಪಾದಿತ ಅಧಿಕಾರಿಗೆ ಏತಕ್ಕಾಗಿ ಕೊಟ್ಟರು ಎಂಬುದು ಸ್ಪಷ್ಟವಾಗಿರುವುದಿಲ್ಲ. ಒಂದು ಸುದ್ಧಿಗಾಗಿ ಅಕ್ರಮ ಸಂಭಾವನೆ ರೂಪದಲ್ಲಿ 10 ಸಾವಿರ ರೂಪಾಯಿಗಳು ಕೊಟ್ಟಿರುತ್ತಾರೆಯೇ ಎಂಬುದೂ ಸಹ ಸಾಬೀತಾಗಿರುವುದಿಲ್ಲ. ಇದರಲ್ಲಿ ಯಾವ ಉದ್ದೇಶಕ್ಕಾಗಿ ಟಿ.ವಿ.9 ಸಂಸ್ಥೆಯಿಂದ ಹಣ ನೀಡಲಾಗಿದೆ ಎಂಬುದೂ ಸಹ ವಿಚಾರಣೆಯಲ್ಲಿ ಸಾಬೀತಾಗಿಲ್ಲ ಹಾಗೂ ವಿಚಾರಣೆಯಲ್ಲಿ ಯಾವುದೇ ರೈತರು ಸಾಕ್ಷಿ ನೀಡಿಲ್ಲ. ಟಿ.ವಿ.9 ಸಂಸ್ಥೆಯವರು, ಈ ಹಣ ತೆಗೆದುಕೊಳ್ಳುವ ದೃಶ್ಯವನ್ನು ಶೂಟ್ ಮಾಡಿದ ಅಧಿಕಾರಿಯು ವಿರೋಧಾಭಾಸದ ಹೇಳಿಕೆಗಳನ್ನು ನೀಡಿರುವುದರಿಂದ ಆಪಾದನೆಯು ಸಾಬೀತಾಗಿಲ್ಲವೆಂದು ವಿಚಾರಣಾಧಿಕಾರಿಗಳು ವರದಿಯನ್ನು ನೀಡಿರುತ್ತಾರೆ.

ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ ಯಾವ ಕೆಲಸಕ್ಕಾಗಿ ಅಕ್ರಮ ಸಂಭಾವನೆ ನೀಡಲಾಯಿತು ಎಂಬ ಬಗ್ಗೆ ದೂರು ಇರುವುದಿಲ್ಲ ಹಾಗೂ ಸಂಬಂಧಪಟ್ಟ ರೈತರ ಸಾಕ್ಷಿಯೂ ಸಹ ಇರುವುದಿಲ್ಲ. ಅದ್ದರಿಂದ, ವಿಚಾರಣಾ ವರದಿಯನ್ನು ಒಪ್ಪಿಕೊಂಡು ಆಪಾದಿತರಾದ ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ, ಇವರ ವಿರುದ್ಧದ ವಿಚಾರಣೆಯನ್ನು ಕೈ ಬಿಡಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 11 ಎಡಿಇ 2007, ಬೆಂಗಳೂರು, ದಿನಾಂಕ: 21ನೇ ಜುಲೈ, 2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಸರ್ಕಾರವು ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ, ಹಿಂದಿನ ತಹಶೀಲ್ದಾರ್, ಚನ್ನಪಟ್ಟಣ ತಾಲ್ಲೂಕು ಪ್ರಸ್ತುತ ಕಂದಾಯ ಅಧಿಕಾರಿ, ಬಿ.ಎಂ.ಟಿ.ಎಫ್. ಬಿಬಿಎಂಪಿ ಕಟ್ಟಡ, ಎನ್.ಆರ್.ಚೌಕ, ಬೆಂಗಳೂರು ಇವರ ವಿರುದ್ಧ ಹೂಡಲಾದ ಇಲಾಖಾ ವಿಚಾರಣೆಯನ್ನು ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಕೈಬಿಟ್ಟು ಆದೇಶಿಸಲಾಗಿದೆ. ಹಾಗೂ ಈ ಹಿಂದೆ ಅಮಾನತ್ತಿನಲ್ಲಿಟ್ಟ ಅವಧಿಯನ್ನು ಕರ್ತವ್ಯದ ಅವಧಿ ಎಂದು ಪರಿಗಣಿಸಿ ಆದೇಶಿಸಿದೆ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಸ್. ಬಿ. ಸಸಾಲಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 2062

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಬಿ. ಸಂಪತ್‌ಕುಮಾರ್, ತಹಶೀಲ್ದಾರ್, ದೊಡ್ಡಬಳ್ಳಾಪುರ ತಾಲ್ಲೂಕು ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರಿಗೆ ಸಾಮಾನ್ಯ ಭವಿಷ್ಯ ನಿಧಿ ಖಾತೆಯಿಂದ ಭಾಗಶಃ ಮೊಬಲಗು ಹಿಂದಕ್ಕೆ ಪಡೆಯಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** ತಹಶೀಲ್ದಾರ್, ದೊಡ್ಡಬಳ್ಳಾಪುರ ತಾಲ್ಲೂಕು ಇವರ ಪತ್ರ ಸಂಖ್ಯೆ: ಇಎಸ್‌ಟಿ/ಸಿಆರ್/01/2010–11 ದಿನಾಂಕ: 29–05–2010 ಹಾಗೂ 22–06–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ಪತ್ರಗಳಲ್ಲಿ, ಶ್ರೀ ಬಿ. ಸಂಪತ್‌ಕುಮಾರ್, ತಹಶೀಲ್ದಾರ್ ದೊಡ್ಡಬಳ್ಳಾಪುರ ತಾಲ್ಲೂಕು ಇವರು ಸಾಮಾನ್ಯ ಭವಿಷ್ಯ ನಿಧಿಯ ಖಾತೆ ಸಂಖ್ಯೆ ಜಿಎ 10121 ಹೊಂದಿದ್ದು, ಸದರಿ ಸಾಮಾನ್ಯ ಭವಿಷ್ಯ ನಿದಿಯ ಖಾತೆಯಲ್ಲಿರುವ ರೂ. 5,40,000/– ಗಳಲ್ಲಿ ರೂ. 4,00,000/– ಗಳನ್ನು ಅವರ ಮಗನ ಮದುವೆ ಸಲುವಾಗಿ ಹಿಂತೆಗೆದುಕೊಳ್ಳಲು ಇಚ್ಚಿಸಿದ್ದು, ನಿಗದಿತ ನಮೂನೆಯಲ್ಲಿ ಭರ್ತಿ ಮಾಡಿ, ಜಿಪಿಎಫ್ ನಿಯಮಗಳನ್ವಯ ಅರ್ಜಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಅಧಿಕಾರಿಯ ಮನವಿಯನ್ನು ಸರ್ಕಾರವು ಪರಿಶೀಲಿಸಿ, ಶ್ರೀ ಬಿ. ಸಂಪತ್‌ಕುಮಾರ್, ತಹಶೀಲ್ದಾರ್ ದೊಡ್ಡಬಳ್ಳಾಪುರ ತಾಲ್ಲೂಕು ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರಿಗೆ ಅವರ ಜಿಪಿಎಫ್ ಖಾತೆಯಿಂದ ಭಾಗಶಃ ಮೊಬಲಗು ಹಿಂದಕ್ಕೆ ಪಡೆಯಲು ಮಂಜೂರಾತಿ ನೀಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 329 ಎಎಸ್‌ಡಿ 2010, ಬೆಂಗಳೂರು, ದಿನಾಂಕ: 24ನೇ ಜುಲೈ, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಸರ್ಕಾರವು ಶ್ರೀ ಬಿ. ಸಂಪತ್‌ಕುಮಾರ್, ತಹಶೀಲ್ದಾರ್ ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಜಿಪಿಎಫ್ ಖಾತೆ ಸಂಖ್ಯೆ: ಜಿಎ 10121 ರಿಂದ ರೂ. 4,00,000/– (ರೂ. ನಾಲ್ಕು ಲಕ್ಷಗಳು ಮಾತ್ರ) ಮೊಬಲಗನ್ನು ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ನಿಯಮ 1957 ರ ನಿಯಮ 27(ಬಿ) ಯನ್ನು ಸಡಿಲಿಸಿ, ನಿಯಮ 27(ಇ) ರ ಪ್ರಕಾರ ಬಳಕೆ ಪ್ರಮಾಣ ಪತ್ರವನ್ನು ಪಡೆಯುವ ಷರತ್ತಿಗೊಳಪಟ್ಟು, ನಿಯಮ 24 (ಸಿ) ಮತ್ತು ನಿಯಮ 27ರ ಅಪವಾದದ ರೀತ್ಯ, ಅವರ ಮಗನ ಮದುವೆಯ ವೆಚ್ಚವನ್ನು ಭರಿಸುವ ಉದ್ದೇಶಕ್ಕಾಗಿ ಹಿಂದಕ್ಕೆ ಪಡೆಯಲು ಮಂಜೂರಾತಿ ನೀಡಿ ಆದೇಶಿಸಿದೆ.

ಮೇಲ್ಕಂಡ ಹಣವನ್ನು ಸದುಪಯೋಗ ಪಡಿಸಿಕೊಂಡ ಬಗ್ಗೆ ದೃಢೀಕರಣ ಪತ್ರ ನೀಡುವಂತೆ ಸಹಾ ಸದರಿ ಅಧಿಕಾರಿಗೆ ನಿರ್ದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 409 ವೆಚ್ಚ–7/2010, ದಿನಾಂಕ: 9–7–2010 ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಸ್. ಬಿ. ಸಸಾಲಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 2063